ಸಂಪುಟ 01 ಸಂಚಿಕೆ 07
ಆಗಸ್ಟ್ 2013 ರೂ.15/-

# ಅಮರ ಬಾಪು ಚಿಂತನ

ಕನ್ನಡ ಮತ್ತು ಆಂಗ್ಲ ಮಾಸಿಕ

ಗಾಂಧೀ ದನಿ ದರ್ಪಣ

## ಸ್ವಾತಂತ್ರ್ಯೋತ್ಸವ ಸಂಚಿಕೆ

AMARA

BAAPU  CHINTANA

GANDHI BHAVAN BENGALURU AUGUST - 2013 KANNADA & ENGLISH MONTHLY

**Amara Baapu Chintana Kannada/English Illustrated monthly - RNI Regd.KARBIL/2013/48372**
ಪ್ರಕಾಶಕರು, ಮುದ್ರಕರು, ಮಾಲಿಕರು – ಜೀರಿಗೆ ಲೋಕೇಶ್,
ಮುದ್ರಣ – ಸ್ಕ್ರೀನ್ ಇಂಪ್ರೆಷನ್ಸ್, ನಂ.88, 1ನೆ ಮಹಡಿ, ಜೀರಿಗೆ ಬಿಲ್ಡಿಂಗ್, 11ನೇ ಅಡ್ಡ ರಸ್ತೆ, ಮಲ್ಲೇಶ್ವರಂ, ಬೆಂಗಳೂರು – 560 003,
ಪ್ರಕಾಶನ – ಗಾಂಧೀ ಭವನ, ಕುಮಾರಪಾರ್ಕ್ ಪೂರ್ವ, ಬೆಂಗಳೂರು – 560 001, ಸಂಪಾದಕರು – ಜೀರಿಗೆ ಲೋಕೇಶ್.



# ಕುಡಿತ ಬೇಡ

**‘ಬೆಂಕಿ ದೇಹವನ್ನು ನಾಶ ಮಾಡಿದರೆ**
**ಕುಡಿತ ದೇಹ ಮತ್ತು ಆತ್ಮ**
**ಎರಡನ್ನೂ ನಾಶಮಾಡುವುದು’**

ಎಷ್ಟೋ ಸಂದರ್ಭಗಳಲ್ಲಿ ಕುಡಿತ ಹಣವನ್ನು ಮಾತ್ರ ಕಸಿಯುವುದಿಲ್ಲ. ಜನರ ಬುದ್ಧಿಯನ್ನೂ ಅಪಹರಿಸಿದೆ. ಕುಡಿತ ತಾತ್ಕಾಲಿಕವಾಗಿ ತಾಯಿ, ಹೆಂಡತಿ, ನ್ಯಾಯ, ಅನ್ಯಾಯ ಇವುಗಳಲ್ಲಿ ಭೇದ ಕಾಣದಂತೆ ಮಾಡುವುದು.

‘ಮದ್ಯಪಾನ ಪಂಚ ಮಹಾ ಪಾತಕಗಳಲ್ಲಿ ಒಂದು’ ಎನ್ನುತ್ತದೆ.
**ಹಿಂದೂಧರ್ಮ**

‘ಮದ್ಯಸೇವನೆ ಮಾಡುವವರನ್ನು ಸೈತಾನನ ಸಂತತಿ’ ಎನ್ನುತ್ತದೆ.
**ಬೈಬಲ್**

‘ಮದ್ಯಸೇವನೆ ಮಾಡುವವರನ್ನು ಹರಾಂ’ ಎನ್ನುತ್ತದೆ.
**ಕುರಾನ್**

ನಮ್ಮಲ್ಲಿರುವ ಎಲ್ಲಾ ಅಜ್ಞಾನಕ್ಕಿಂತ ಹೆಚ್ಚು ಅಪಾಯಕಾರಿಯಾದದ್ದು ಕುಡಿತದ ಕುರಿತು ಒಲವು

**– ಮಹಾತ್ಮ ಗಾಂಧೀ**

**ಪ್ರಕಟಣೆ : ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಳಿ**
**KARNATAKA STATE TEMPERANCE BOARD**
ವಿಶ್ವೇಶ್ವರಯ್ಯ ಮುಖ್ಯ ಗೋಪುರ, 6ನೇ ಮಹಡಿ, ಡಾ॥ ಬಿ. ಆರ್. ಅಂಬೇಡ್ಕರ್ ವೀದಿ, ಬೆಂಗಳೂರು – 560 001
ದೂರವಾಣಿ : 22863230 ಫಾಕ್ಸ್ : 22865832
**Website** : www.kar-temperance.org **E-mail** : kar.temperance @gmail.com

**Published, Printed, Owned by - JEERIGE LOKESH,**
**Printed at Screen Impressions, No. 88, 1st floor, Jeerige building, 11th cross, Malleswaram, Bangalore – 560 003**
**Published at Gandhi Bhavana, Kumara Park East, Bangalore-560001, Editor JEERIGE LOKESH.**

ಅಮರ ಬಾಪು ಚಿಂತನ
ಸಂಪುಟ – 1 ಸಂಚಿಕೆ – 7 ಆಗಸ್ಟ್ 2013



# ಚರಿತ್ರೆಯ ಎಚ್ಚರಿಕೆ

**ಭಾ**ರತದ 66ನೇ ಸ್ವಾತಂತ್ರ್ಯ ದಿನಾಚರಣೆಗೆ ತುಂಬು ಹೃದಯದ ಸ್ವಾಗತ. ಇದನ್ನು ಪಡೆಯಲು 1857ರಲ್ಲಿ ಝಾನ್ಸಿರಾಣಿ ಲಕ್ಷ್ಮೀಭಾಯಿ ಇವರಿಂದ ಪ್ರಾರಂಭವಾದ ಸ್ವತಂತ್ರ ಚಳವಳಿ ತದನಂತರದ ಮಹಾತ್ಮ ಗಾಂಧೀಜಿಯವರ ಅಹಿಂಸಾತ್ಮಕ, ಅಸಹಕಾರ ಚಳವಳಿ, ವಿದೇಶಿ ವಸ್ತುಗಳ ಬಹಿಷ್ಕಾರ, ಸ್ವದೇಶಿ ಸತ್ಯಾಗ್ರಹಗಳ ಮೂಲಕ 1947ರಲ್ಲಿ ಸ್ವಾತಂತ್ರ್ಯವನ್ನು ಪಡೆದೆವು. ಈ ಸಂದರ್ಭದಲ್ಲಿ ದೇಶಕ್ಕಾಗಿ ಪ್ರಾಣತ್ಯಾಗ ಮಾಡಿದ ಪ್ರತಿಯೊಬ್ಬರನ್ನೂ ನೆನೆಯ ಬೇಕಾದದ್ದು ನಮ್ಮ ಆಧ್ಯ ಕರ್ತವ್ಯ. ಅಲ್ಲದೆ ಹೋರಾಟವನ್ನು ಮರೆಯದೇ ಇರಲು ಮುಂದಿನ ಪೀಳಿಗೆಗೆ ಪಾಠವಾಗಿ ಕಲಿಸಬೇಕಾದ್ದು ಅನಿವಾರ್ಯ. ಇಲ್ಲದೇ ಹೋದರೆ ಈ ಬಲಿದಾನಗಳಿಂದ ಪಡೆದ ಸ್ವಾತಂತ್ರ್ಯ ಅನುಭವಿಸಲು ನೈತಿಕವಾಗಿ ನಮಗೆ ಹಕ್ಕಿಲ್ಲ.

ಸ್ವಾತಂತ್ರ್ಯ ನಂತರ ಮಹಾತ್ಮ ಗಾಂಧೀಜಿಯವರ ಆಶಯಗಳಾದ ಗ್ರಾಮಸ್ವರಾಜ್ಯ, ರಾಮರಾಜ್ಯ, ಕಲ್ಪನೆಗಳು, ಅಹಿಂಸಾ ಮತ್ತು ಸ್ವದೇಶಿ ವಿಚಾರಗಳು ಪುಸ್ತಕಗಳಲ್ಲೇ ಮರೆಯಾದವು.

ನಿಜವಾದ ಸ್ವಾತಂತ್ರ್ಯವೆಂದರೆ 'ಅರ್ಧ ರಾತ್ರಿಯಲ್ಲಿ ಅಬಲೆಯೊರ್ವಳು ಒಬ್ಬಂಟಿಯಾಗಿ ನಿರ್ಭಯದಿಂದ ಓಡಾಡುವಂತಿರಬೇಕು ನಮ್ಮ ದೇಶ' ಎಂದು ಗಾಂಧೀಜಿ ಹೇಳಿದ್ದರು. ಈಗ ಹಾಡಹಗಲೇ ದಿನ ನಿತ್ಯ ಒಂಟಿ ಯುವತಿ, ಅನಾಥ ಚಿಕ್ಕಮಕ್ಕಳು, ವೃದ್ಧೆಯಾದ ಮಾತೆ ಯಾರಿಗೂ ಈ ದೇಶದಲ್ಲಿ ರಕ್ಷಣೆ ಇಲ್ಲ. ಹಾಡಹಗಲೇ ದೌರ್ಜನ್ಯ, ಅತ್ಯಾಚಾರ, ದರೋಡೆಗಳೂ, ನಿರ್ಭಯವಾಗಿ ನಡೆಯುತ್ತವೆ. ವಿಶ್ವಕ್ಕೆ ಆದ್ಯಾತ್ಮ, ಮಹಾನ್ ಚಿಂತನೆಗಳನ್ನು ನೀಡಿದ ಭಾರತಕ್ಕೆ ಈಗ ಬೌದ್ಧಿಕ ದಿವಾಳಿತನವೆ? ಇದಕ್ಕೆ ಕಾರಣಗಳು ಏನು? ಉತ್ತಮ ಮೌಲ್ಯ ಶಿಕ್ಷಣದ ಕೊರತೆಯೇ? ಆಧುನಿಕ ತಂತ್ರಜ್ಞಾನ, ಮಾಧ್ಯಮ ಮತ್ತು ಅಂತರ್‌ಜಾಲದ ದುರ್ಬಳಕೆಯ ಪರಿಣಾಮವೇ? ಈಸ್ಟ್ ಇಂಡಿಯಾ ಕಂಪನಿ ಸ್ಥಾಪನೆಯಿಂದ ಇಡೀ ಭಾರತ ಸುಮಾರು 250 ವರ್ಷಕ್ಕಿಂತ ಹೆಚ್ಚುಕಾಲ ದಾಸ್ಯದ ಗುಲಾಮಗಿರಿಯನ್ನು ಅನುಭವಿಸಬೇಕಾಯಿತು. ಈಗ ಪ್ರಪಂಚದ ಅನೇಕ ಬಹುರಾಷ್ಟ್ರೀಯ ಕಂಪನಿಗಳಿಗೆ ನಾವೇ ಆಹ್ವಾನ ನೀಡಿದ್ದೇವೆ. ಸ್ವದೇಶದ ಕಲ್ಪನೆಯನ್ನೇ ಬಿಟ್ಟು ವಿದೇಶದ ವ್ಯಾಮೋಹಕ್ಕೆ ಬಲಿಯಾಗಿದ್ದೇವೆ. ಭಾರತದಲ್ಲಿನ ಸಂಪತ್ತು ಬಹುರಾಷ್ಟ್ರೀಯ ಸಂಸ್ಥೆಗಳ ಪಾಲಾಗುತ್ತಿವೆ.

ಆಂತರಿಕವಾಗಿ ನುಗ್ಗಿ ನಮ್ಮ ಪಟ್ಟಣಗಳಲ್ಲಿ ವಿಧ್ವಂಸಕ ಕೃತ್ಯ ಎಸಗಿ ಜನರಲ್ಲಿ ಭಯ ಭೀತಿ ಹುಟ್ಟಿಸುತ್ತಿದ್ದಾರೆ. ಹೀಗೆ ಆದರೆ ಸ್ವತಂತ್ರ ಭಾರತ ಬ್ರಿಟಿಷ್ ಭಾರತಕ್ಕಿಂತ ಹೀನಾಯ ಸ್ಥಿತಿಗೆ ತಲುಪಲು ಹೆಚ್ಚುಕಾಲ ಬೇಕಾಗಿಲ್ಲ. ಏನೇ ಆಗಲಿ ಇದು ಹೀಗೆ ಮುಂದುವರಿದರೆ ಮುಂದೆ ಭಾರತೀಯರಾದ ನಾವು ಪ್ರಪಂಚದ ಎದುರು ತಲೆತಗ್ಗಿಸಬೇಕಾಗುತ್ತದೆ. ಭಾರತೀಯರ ಅಂತಃಸತ್ವ ನಾಶವಾಗಿ ಆರ್ಥಿಕವಾಗಿ ದೀವಾಳಿ ಆಗುತ್ತೀದ್ದೇವೆ. ಹಳ್ಳಿಗಳಲ್ಲಿ ಜನ ತಮ್ಮ ಸ್ವಂತ ಉದ್ದಿಮೆ ಪ್ರಾರಂಭಿಸಲು, ಸರ್ಕಾರ ಎಲ್ಲಾ ವಿದಧ ಸೌಲಭ್ಯಗಳನ್ನು ಪ್ರತಿ ಹಳ್ಳಿಗಳಿಗೂ ನೀಡಿದ–ರೆ, ನಮ್ಮ ಯುವಜನಾಂಗ ಹಳ್ಳಿಗಳಿಂದ ಪಟ್ಟಣಗಳಿಗೆ ವಲಸೆ ಬರುವುದು ಸಾಧ್ಯವಾದಷ್ಟೂ ತಪ್ಪಿಸಬಹುದು. ಇದರಿಂದ ಗಾಂಧೀಜಿಯವರ ಕನಸಿನ 'ಗ್ರಾಮ ಸ್ವರಾಜ್ಯ' ಸ್ಥಾಪಿಸಲು ಸಾಧ್ಯವಾಗುವುದರಲ್ಲಿ ಯಾವುದೇ ಅನುಮಾನವಿಲ್ಲ.

ಜೀರಿಗೆ ಲೋಕೇಶ್

ಆಗಸ್ಟ್ 2013



# ಈ ಸಂಚಿಕೆಯಲ್ಲಿ...



## ಬ್ಲೋ ಅಪ್



ಗುರುದೇವ ಮಹಾತ್ಮ

## ಸ್ಥಿರ ಶೀರ್ಷಿಕೆ

▶ ಸಂಪಾದಕೀಯ ▶ ಕಾವ್ಯ ▶ ಅಭಿವೃದ್ಧಿ ▶ ಪ್ರಚಲಿತ ▶ ಹೀಗಿದ್ದರು ಬಾಪು ▶ ಕತೆ ▶ ಆರೋಗ್ಯ ▶ ಪತ್ರ ▶ ಕರ್ನಾಟಕ ಗಾಂಧಿ ಮಾರ್ಗ ▶ ಸ್ಫೂರ್ತಿ ▶ ಅಲ್ಲಲ್ಲಿ ▶ ಹೋರಾಟ ▶ ಪುಸ್ತಕ ಪರಿಚಯ

ಗಾಂಧಿ ಜೀವನ ರೇಖಾ ಚಿತ್ರ
ಸುನೀತಾ ಅವಧಾನಿ
ಪುಟ 15



# ಸ್ವಾತಂತ್ರ್ಯದ ಹಿಗ್ಗು – ಕುಗ್ಗು



ಸ್ವಾತಂತ್ರ ಸ್ವಾತಂತ್ರ ಭಾರತವು ಸ್ವಾತಂತ್ರ
ಸ್ವರ್ಣಾಕ್ಷರದಿ ಮೆರವಹಿಂಸೆಯಾ ಸ್ವಾತಂತ್ರ
ಎಣೆಯಿಲ್ಲದತ್ಯುಗ್ರ ಸಾಮ್ರಾಜ್ಯ ಸ್ವಾರ್ಥಿಗಳ
ಅಣುಬಾಂಬಿನಾ ಯುಗವನಾಚಿಸುವ ಸ್ವಾತಂತ್ರ.
ದೇಶಗಳು ದ್ವೀಪಗಳು ನಾಡುಗಳು ಬೀಡುಗಳು
ಧೀಯುತರು ಧಾರ್ಮಿಕರು ಹಿಂಸಕರು ತಾಂತ್ರಿಕರು
'ಓಹೊ ಭಾರತ ಸೌಮ್ಯ ಸ್ವಾತಂತ್ರ ವೀರರೇ
ಬಾಪೆಂ'ದು ತಲೆದೂಗಿ ಮೆಚ್ಚಿಸಿದ ಸ್ವಾತಂತ್ರ.
ಒಂದುಕಡೆ ದ್ವೇಷಗಳು ಕುತ್ಸಿತಕುತಂತ್ರಗಳು
ಒಂದುಕಡೆ ಪರರಾಜ್ಯ ನುಂಗುವಾ ನೀತಿಗಳು
ಮತ್ತೊಂದುಕಡೆ ಕ್ರೂರ ಬಾಂ ಬಿಡುವ ಯುದ್ಧಗಳು
ಮಗುದೊಂದುಕಡೆ ಶಾಂತ ಶಾಂತೆಂಬ ಕೂಗುಗಳು
ಈ ತಂತ್ರವೀ ನೀತಿ ಈ ಯುದ್ಧ ಮಧ್ಯದಲಿ
ನೂರಾರು ವರ್ಷಗಳ ದಾಸ್ಯಮಂ ಕಿತ್ತೊಗೆದು
ಇಂದಾವು ಧರ್ಮದಲಿ ಸತ್ಯದಲಿ ಶಾಂತಿಯಲಿ
ಶಸ್ತ್ರಮಂ ಹಿರಿಯದಲೆ ಸ್ವಾರಾಜ್ಯ ಗಳಿಸಿದೆವು
ಇದು ಭಾಗ್ಯ ಸೌಭಾಗ್ಯವಿದು ಪುಣ್ಯಜನಮಾನ್ಯ–
ವಿದು ನಮ್ಮ ಭಾರತದ ವರಕೀರ್ತಿ ಮುಕುಟ....

ಆದರೇನಾದರೇನೆಲೆ ಭಾರತೀಯರೆ!
ಆ ಭಾಗ್ಯವಾ ಪುಣ್ಯವಾ ಕೀರ್ತಿಕುಸುಮಗಳು
ಒಂದೆದಿನ....ಅಲ್ಲಲ್ಲ ಒಂದೆ ಚಣದಲಿ ಬಾಡಿ–
ಬತ್ತಿದವು ಬಾಪುವಿನ ಕಗ್ಗೊಲೆಯ ಬಿಸಿಗೆ.
ಭಾರತದ ಬನಸಿರಿಯ ಸತ್ಯಸುಂದರ ಲತೆಯೊ
ಳೊಂದೆಯೊಂದರಳಿತ್ತ ಹಿಂಸೆಯಾ ಕುಸುಮ
ಅದರ ಗುಣವರಿಯದಾ ಜಾತಿಯಾ ಕೋತಿಗಳು
ನಿರ್ದಯದಿ ನಿಷ್ಠುರದಿ ಕಿತ್ತೆಸೆದವಾಹ
ಪ್ರಕೃತಿ ಜ್ವಾಲಾಮಯ ಕೃತಿಯ ತಾಳಲು ಬಹುದು
ವಿಕೃತಿ ಮಾನವನೆದೆಯ ಕೃತಿಯ ತಾಳಲು ಬಹುದೆ
ಸತ್ಯಾತ್ಮ ಹಿಂಸಾತ್ಮ ಧರ್ಮಾತ್ಮ ಸುಮಹಾತ್ಮ
ಗಾಂಧಿಜನಿಸಿದ ಭಾರತವು ಎಂದು ಹಿಗ್ಗುವುದೆ?
ಅಲ್ಲದೊಡೆ ಆಶಾಂತ ಮೂರ್ತಿಯಂ ಕೊಲೆಗೈದ–
ಹಂತಕರು ಇಲ್ಲೆ ಪುಟ್ಟಿದರೆಂದು ಕುಗ್ಗುವುದೆ?

ಪುಣ್ಯಭಾರತ ಭುವಿಯ ಪುಣ್ಯವಂ ಕಂಗೆಡಿಸಿ
ಕೊಲೆಗೈದು ಗಳಿಸುವಾ ಕೈಲಾಸವದು ಬೇಡ
ಕಲ್ಗಳಂ ಕರಗಿಸುವ ಈ ಘಟನೆಯಿಂದಲಿ
ಕಲಿತುದೇನೆಲೆ ನಾವು? ಮತ್ತೆ ಜಾತೀಯತೆಯೆ
ಅಯ್ಯೊ ನೋಡೆಲೆನೋಡ ಜಾತಿಭೂತದ ಸೇಡು
ಕೊಲೆ ಸುಲಿಗೆ ತಾಂಡವದ ನೃತ್ಯದಿಂ ಮೆರೆಯುತಿದೆ
ಸ್ವಾರ್ಥಶಾಕಿನಿ ನೋಡ ಕಳ್ಳಪೇಟೆಯನೊಡ್ಡಿ
ಬಡವರೊಡಲಲಿ ಲಾಸ್ಯ ನೃತ್ಯಮಂ ಗೈಯುತಿದೆ
ಆತ್ಮ ಪ್ರಶಂಸೆಯಲಿ ಡಿಳ್ಳಿಯಂ ಟೀಕಿಸುವ
ಮತ್ಸರದ ಮೋಹಿನಿಯ ಅಲೆದಾಟವದು ನೋಡ
ದಾರಿದ್ರ ಸಂತಾಪ ದುಃಖಬರಗಾಲಗಳು
ದೇಶಶಕ್ತಿಯನಳಿಪ ದಾರುಣವಿಷಾಹಿಗಳು
ಸ್ವಾತಂತ್ರದಮೃತದಲಿ ಸಿಡಿದೆದ್ದ ಘನವಿಷವ
ಸೇವಿಸುವ ಮಹದೇವ ಗಾಂಧಿತಾನಿಂದಿಲ್ಲ
ಬನ್ನಿ ರೈ ಭಾರತದ ಮಾದೇವಿ ಮಕ್ಕಳೆ
ಒಬ್ಬೊಬ್ಬರೊಂದಿಷ್ಟು ನಾವೆಲ್ಲರುಂಬುವ.
ಸ್ವಾತಂತ್ರ ದಿನವಿದು ಶಾಂತಿಯಿಂದಾಚರಿಪ
ಮೋದವೋ? ಖೇದವೋ? ರಾಮೇಶತಾಬಲ್ಲ.

**ಜೋಳದ ರಾಶಿ ದೊಡ್ಡನಗೌಡ**

# ಸ್ವಾತಂತ್ರ್ಯ ಹೋರಾಟ ಸಾಗಿದ ದಾರಿ.......

ಡಾ. ಹೊ. ಶ್ರೀನಿವಾಸಯ್ಯ





**ಹಿಂ**ದಿನ ಕಾಲದಲ್ಲಿ ಎಲ್ಲೊ ಯುದ್ಧಭೂಮಿಯಲ್ಲಿ ಹೋರಾಟವಾದರೆ, ಗಾಂಧೀಜಿಯವರ ಆಗಮನದಿಂದ ಸ್ವಾತಂತ್ರ್ಯ ಚಳವಳಿ ಶ್ರೀಸಾಮಾನ್ಯನ ಚಳವಳಿಯಾಗಿ ಮಾರ್ಪಾಡಾಗಿರುವುದು ಒಂದು ವಿಶೇಷ.

ಹಳೆಯ ಮೈಸೂರು ರಾಜ್ಯ ರಾಜ, ಮಹಾರಾಜ ಆಳ್ವಿಕೆಯಿಂದ ಹಾಗೂ ಅನೇಕ ಜನೋಪಕಾರಿ ಆಡಳಿತಕಾರರ ಕೈಗೆ ಆಡಳಿತ ಸಿಕ್ಕಿದ್ದರಿಂದ ಶ್ರೀಸಾಮಾನ್ಯನಿಗೆ ಬ್ರಿಟಿಷರ ದಬ್ಬಾಳಿಕೆಯ ತಾಪ ಹೆಚ್ಚಾಗಿ ತಟ್ಟಲಿಲ್ಲ. ಆದರೆ ಗುಲಾಮಗಿರಿಯಿಂದ ಬಿಡಿಸಿಕೊಳ್ಳಲು... ಚಳವಳಿಗಳು ನಡೆಯುತ್ತಲೇ ಇದ್ದವು.

1926ರಲ್ಲಿ ಸರ್ ಮಿರ್ಜ ಇಸ್ಮಾಯಿಲ್ ದಿವಾನರಾದಾಗ, ಬಿನ್ನಿಮಿಲ್ ಕಾರ್ಮಿಕರಿಗೂ ಆಡಳಿತವರ್ಗದವರಿಗೂ ಭಿನ್ನಾಭಿಪ್ರಾಯ ಬಂದು ಮುಷ್ಕರ ಹೂಡಿದಾಗ, ಶಾಂತಿಪಾಲನೆಗೆಂದು ಗುಂಡು ಹಾರಿಸಿದರು. ನಾಲ್ಕು ಜನ ಕಾರ್ಮಿಕರು ಗುಂಡಿನ ಬಾಯಿಗೆ ತುತ್ತಾದರು. ಜನಗಳಲ್ಲಿ ಜುಗುಪ್ಸೆ ಹುಟ್ಟಿತು. ರಾಜಕೀಯ ಹೋರಾಟಕ್ಕೆ ಇಂಬು ಕೊಟ್ಟಿತು.

1928ರಲ್ಲಿ ಬೆಂಗಳೂರು ಸುಲ್ತಾನ ಪೇಟೆಯಲ್ಲಿ ಗಣಪತಿ ಗಲಾಟೆ ಎಂದು ಪ್ರಸಿದ್ಧವಾಗಿದ್ದ ಕೋಮುವಾರು ಘರ್ಷಣೆ, ಅಹಿತ ವಾತಾವರಣ ಕಲ್ಪಿಸಿತು. ಅನೇಕ ಕಡೆ ಗುಂಡು ಹಾರಿಸಿದರು. ಈ ಘಟನೆಯಿಂದ ಜನ ರೊಚ್ಚಿಗೆದ್ದು, ಆಗಿನ ಜನನಾಯಕರು, ಆಡಳಿತದ ಮೇಲೆ ಹಿಡಿತ ಇಟ್ಟುಕೊಳ್ಳಲು ಬಯಸಿ ಮಹಾರಾಜರ ಅಶ್ರಯದಲ್ಲಿ ಪೂರ್ಣ ಜವಾಬ್ದಾರಿ ಸರ್ಕಾರ ಸ್ಥಾಪನೆಯ ಅಗತ್ಯವನ್ನು ಮನಗಂಡರು.

1928ರಿಂದ ಬೆಂಗಳೂರು ರಾಜಕೀಯ ಚಟುವಟಿಕೆಗಳಿಗೆ ಒಂದು ಕೇಂದ್ರವಾಯಿತು. ಸುಪ್ರಸಿದ್ಧ ಸಾಹಿತಿ, ಚಿಂತಕ ಡಿ.ವಿ.ಗುಂಡಪ್ಪ, ಸಂಪಿಗೆ ವೆಂಕಟಪತಯ್ಯ,

> **ಕೆಂಪೇಗೌಡರು ಸ್ಥಾಪಿಸಿದ ಬೆಂಗಳೂರು, ಸ್ಥಾಪನೆ ಆದಾಗಿನಿಂಲೂ ಒಬ್ಬರಾದ ಮೇಲೆ ಒಬ್ಬರಿಂದ ದಾಳಿಯೂ, ಇದರಿಂದ ಬಿಡಿಸಿಕೊಳ್ಳಲು, ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಲೇ ಇದ್ದಾರೆ ನಾಡಿನ ಜನ.**

ಎಚ್. ವಿ. ಸುಬ್ರಮಣ್ಯಂ, ವೀರಕೇಸರಿ ಸೀತಾರಾಮಶಾಸ್ತ್ರಿ. ಟಿ.ಟಿ. ಶರ್ಮ, ರಾಮಲಾಲ್ ತಿವಾರಿ, ನಿಟ್ಟೂರು ಶ್ರೀನಿವಾಸರಾವ್ ಅನೇಕ ನಾಯಕರು ಈ ಚಳವಳಿಗೆ ಪ್ರೋತ್ಸಾಹ ನೀಡಿದರು. 1930ರಲ್ಲಿ ಉಪ್ಪಿನ ಸತ್ಯಾಗ್ರಹದಲ್ಲಿ ಬೆಂಗಳೂರಿನಿಂದ ಅನೇಕ ಮಹನೀಯರು ಭಾಗವಹಿಸಿದ್ದರು. ಅವರಲ್ಲಿ ಬೆಂಗಳೂರಿನ ವಿ.ಎಸ್. ನಾರಾಯಣರಾವ್‌ರವರೂ ಒಬ್ಬರು. 1931ರಲ್ಲಿ ಮೈಸೂರು ಸ್ಟೇಟ್ ಕಾಂಗ್ರೆಸ್ ಎಂದು ರಾಜಕೀಯ ಸಂಸ್ಥೆಯಾಗಿ ಪ್ರಾರಂಭವಾದದ್ದು ಬೆಂಗಳೂರಿನಲ್ಲಿ. ಮೈಸೂರಿನ ಎಂ. ವೆಂಕಟಕೃಷ್ಣಯ್ಯನವರ ಸ್ಫೂರ್ತಿಯೊಡನೆ, ಜವಾಬ್ದಾರಿ ಸರಕಾರ ಪಡೆಯಲು ಈ ಸಂಸ್ಥೆ ಸ್ಥಾಪನೆಯಾಯಿತು.

ಮೈಸೂರು ಸಂಸ್ಥಾನದ ಚುನಾವಣೆಗಳು ನಡೆದು ಸ್ಟೇಟ್ ಕಾಂಗ್ರೆಸ್ ಪ್ರತಿನಿಧಿಗಳು ಎಲ್ಲಾಕಡೆಯಲ್ಲೂ ಬಹುಮತ ಪಡೆದರೂ, ಸರಕಾರದಿಂದ ದಬ್ಬಾಳಿಕೆ ಮುಂದುವರಿಯಿತು. ಪ್ರತಿಭಟಿಸಲು ಯುವಕರು, ವಿದ್ಯಾರ್ಥಿಗಳು ಮುಂದಾದರು. ಟಿ. ಸಿದ್ದಲಿಂಗಯ್ಯನವರ ಅಧ್ಯಕ್ಷತೆಯಲ್ಲಿ ಕಾಂಗ್ರೆಸ್ ಸಂಸ್ಥೆ ಜವಾಬ್ದಾರಿ ಸರಕಾರದ ಸ್ಥಾಪನೆಗಾಗಿ ಜನರನ್ನು ಹುರಿದುಂಬಿಸಿತು. ನಾಯಕರು ದಸ್ತಗಿರಿಯಾದರು. ಕೆ.ಟಿ. ಭಾಷ್ಯಂ, ಅಧಿಕಾರ ವಹಿಸಿಕೊಂಡು, ಭಾಷಣ ಮಾಡಿದಾಗ, ರಾಜದ್ರೋಹ ಭಾಷಣಗಳೆಂದು ಅವರನ್ನು ದಸ್ತಗಿರಿ ಮಾಡಿದರು. ನಂತರ ಹೆಚ್. ಕೆ. ವೀರಣ್ಣಗೌಡರು ನಾಯಕತ್ವ ವಹಿಸಿಕೊಂಡರು. 'ಜನವಾಣಿ' ಸಂಪಾದಕ ಬಿ.ಎನ್. ಗುಪ್ತರವರನ್ನು ಮೈಸೂರು ಸಂಸ್ಥಾನದಿಂದ ಗಡೀಪಾರು ಮಾಡಲಾಯಿತು.

1938ರಲ್ಲಿ ಮೈಸೂರು ಕಾಂಗ್ರೆಸ್ ಸ್ಥಾಪನೆಯಾಯಿತು. ಮದ್ದೂರಿನ ಬಳಿ ಶಿವಪುರದಲ್ಲಿ ಕಾಂಗ್ರೆಸ್ ಅಧಿವೇಶನ ನಡೆಯಿತು ಟಿ. ಸಿದ್ದಲಿಂಗಯ್ಯ ದಸ್ತಗಿರಿಯಾದರು. ನಂತರ ಎಚ್.ಸಿ. ದಾಸಪ್ಪನವರು ನಂತರ ಸಾಲಾಗಿ ಅನೇಕ ಹಿರಿಯ ನಾಯಕರು ದಸ್ತಗಿರಿಯಾದರು. ಇದಾದ ಸ್ವಲ್ಪ ದಿನಗಳಲ್ಲೇ ಕೋಲಾರದ ವಿದುರಾಶ್ವತ್ಥದಲ್ಲಿ ಒಂದು ಹತ್ಯಾಕಂಡವಾಯಿತು 40ಕ್ಕೂ ಮೀರಿ ಜನ ಸತ್ತರು. ಈ ಘಟನೆಗಳ ಪ್ರತಿಧ್ವನಿ ಬೆಂಗಳೂರಿನಲ್ಲಿ ಹೊಗೆಯಾಡುತ್ತಿತ್ತು.

ಮಹತ್ಮಾಗಾಂಧಿ ಮೊಟ್ಟಮೊದಲು ಬೆಂಗಳೂರಿಗೆ ಬಂದದ್ದು 1915ರಲ್ಲಿ. 1914ರಲ್ಲಿ ದಕ್ಷಿಣ ಆಫ್ರಿಕಾ ಸತ್ಯಾಗ್ರಹ ಸಮರ ಯಶಸ್ವಿಯಾಗಿ ನಡೆಸಿ ಭಾತರಕ್ಕೆ ಹಿಂದಿರುಗಿದ ಗಾಂಧೀಜಿ, ಹಣ ಸಂಗ್ರಹಣೆಗಾಗಿ ಭಾರತಾದ್ಯಂತ ಪ್ರವಾಸವನ್ನು ಕೈಗೊಂಡರು. ಸಾರ್ವಜನಿಕ ಕ್ಷೇತ್ರದಲ್ಲಿ ಪ್ರಾಮುಖ್ಯ ಪಡೆದಿದ್ದ ಸುಪ್ರಸಿದ್ಧ ಸಾಹಿತಿ ಡಿ.ವಿ. ಗುಂಡಪ್ಪನವರ ಆಹ್ವಾನದ ಮೇಲೆ ಗಾಂಧೀಜಿ, ಕಸ್ತೂರಿಬಾ, ಮದರಾಸಿನ ನಟೇಶನ್ ಬೆಂಗಳೂರಿಗೆ ನಿಧಿ ಸಂಗ್ರಹಿಸಲು ಪ್ರಥಮ ಭೇಟಿ ಕೊಟ್ಟರು. ರೈಲಿನಿಂದ ಇಳಿಸಿ, ರೈಲ್ವೆ ನಿಲ್ದಾಣದಿಂದ ವಿದ್ಯಾರ್ಥಿಗಳೇ ಎಳೆದುಕೊಂಡು ಹೋಗುವ ಸಾರೋಟು ಗಾಡಿಯಲ್ಲಿ, ಗಾಂಧೀಜಿಯವರನ್ನು ಮೆರವಣಿಗೆಯಲ್ಲಿ ಕರೆದುಕೊಂಡು ಹೋಗುವ ಏರ್ಪಡಾಗಿತ್ತು ಅದಕ್ಕೆ ಅವರು ಒಪ್ಪದೆ ಆನಂದರಾವ್ ವೃತ್ತದ ಹತ್ತಿರ ಏರ್ಪಾಡುಮಾಡಿದ್ದ ಅವರ ಬಿಡಾರಕ್ಕೆ ನಡದೇ ಹೋದರು. ಡಿ.ವಿ.ಜಿ.ಯವರು ಸಂಗ್ರಹಿಸಿದ್ದ ಹಣಕೊಟ್ಟರು.

> 1927ರಲ್ಲಿ ಗಾಂಧೀಜಿ ಸರ್ಕಾರದ ಆಹ್ವಾನದ ಮೇಲೆ ನಂದಿಬೆಟ್ಟದಲ್ಲಿ ವಿಶ್ರಾಂತಿ ಪಡೆಯಲು ಬಂದರು. ಬೆಂಗಳೂರಿನಲ್ಲಿ ನಾಲ್ಕು ತಿಂಗಳು ತಂಗಿದ್ದರು. ನಿಟ್ಟೂರು ಶ್ರೀನಿವಾಸರಾವ್‌ರವರು ಅವರ ಹತ್ತಿರ ಸ್ವಯಂ ಸೇವಕರಾಗಿ ಕೆಲಸ ಮಾಡಿದರು.

ಸರ್.ಎಂ. ವಿಶ್ವೇಶ್ವರಯ್ಯನವರೂ ಕಾಣಿಕೆ ಕೊಟ್ಟಿದ್ದರು. ಗೋಖಲೆಯವರ ಭಾವಚಿತ್ರ ಅನಾವರಣ ಮಾಡಿದರು. ಈಗಲೂ ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯಲ್ಲಿ ಆ ಚಿತ್ರವನ್ನು ಕಾಣಬಹುದು. 1938ರಲ್ಲಿ ಗಾಂಧೀಜಿಯವರು ಮಲ್ಲೇಶ್ವರದ ಕನ್ನಿಕಾಪರಮೇಶ್ವರಿ ದೇವಾಲಯ ಮತ್ತು ಮಲ್ಲೇಶ್ವರಂ ಅಸೋಸಿಯೇಶನ್‌ಗಳಿಗೆ ಭೇಟಿ ಕೊಟ್ಟಾಗ ಅವರ ದರ್ಶನ ಪಡೆಯಲು ಭಾಗ್ಯ ದೊರೆಯಿತು ನನಗೆ.

ಹಳೇ ಮೈಸೂರಿನಲ್ಲಿ ಅನೇಕ ದಿನಪತ್ರಿಕೆಗಳೂ ವಾರಪತ್ರಿಕೆಗಳು ಸ್ವಾತಂತ್ರ್ಯ ಚಳವಳಿಗೆ ಪ್ರೋತ್ಸಾಹ, ಉತ್ತೇಜನ ಕೊಡುತ್ತಿದ್ದವು. ಬೆಂಗಳೂರಿನಲ್ಲಿ ಒಕ್ಕಲಿಗರ ಪತ್ರಿಕೆ ; ಬಿ.ಎನ್. ಗುಪ್ತರ 'ಪ್ರಜಾಮತ', ರಾಮಯ್ಯನವರ 'ತಾಯಿನಾಡು', ವೀರಕೇಸರಿ ಸೀತಾರಾಮಶಾಸ್ತ್ರಿಗಳ 'ವೀರಕೇಸರಿ' ಟಿ.ಟಿ. ಶರ್ಮ ಮತ್ತು ಸಿದ್ದವನಹಳ್ಳಿ ಕೃಷ್ಣಶರ್ಮರ 'ವಿಶ್ವ ಕರ್ನಾಟಕ', ರಾಷ್ಟ್ರೀಯ ವಾದದ ಪತ್ರಿಕೆಗಳಾದವು. ಜನರನ್ನು ಸ್ವಾತಂತ್ರ್ಯ ಚಳವಳಿಗೆ ಹುರಿದುಂಬಿಸಿದವು. ತಮ್ಮ ನಿರ್ಭೀತ ಬರವಣಿಗೆಯಿಂದ, ವ್ಯಕ್ತಿ ಸ್ವಾತಂತ್ರ್ಯ ಮತ್ತು ಪತ್ರಿಕಾ ಸ್ವಾತಂತ್ರ್ಯಗಳನ್ನು ಎತ್ತಿ ಹಿಡಿಯುವುದರಲ್ಲಿ ಅವು ತೋರಿಸಿದ ದಿಟ್ಟತನ ಸರ್ವಕಾಲಕ್ಕೂ ಅನುಕರಣೀಯ. ಸರಕಾರ ಎಷ್ಟೇ ತೊಂದರೆ, ತೊಡರುಗಳನ್ನು ಒಡ್ಡಿದ್ದರೂ ಸಹ, ಪತ್ರಿಕೆಗಳನ್ನು ನಿಲ್ಲಿಸದೆ ಟಿ.ಟಿ. ಶರ್ಮ ಮತ್ತು ಸಿದ್ದವನಹಳ್ಳಿ ಕೃಷ್ಣಶರ್ಮ, ಹರಿತ ಭಾಷೆಯ ಲೇಖನಗಳಿಂದ ಸರಕಾರದ ತಪ್ಪುಗಳನ್ನು ಎತ್ತಿ ಸಾರ್ವಜನಿಕರಿಗೆ ತೋರಿಸುವುದಲ್ಲದೆ, ಜನಸಾಮಾನ್ಯರಲ್ಲಿ ರಾಷ್ಟ್ರೀಯ ಭಾವನೆ, ಜಾಗೃತಿ ಉಂಟುಮಾಡತೊಡಗಿದರು.

1942ರಲ್ಲಿ ಮಹಾತ್ಮ ಗಾಂಧೀಜಿಯವರು ಕೊಟ್ಟ ಕೊನೆಯ ಕರೆ 'ಬ್ರಿಟಿಷರೇ ಭಾರತ ಬಿಟ್ಟು ತೊಲಗಿ'. ಈ ಕಹಳೆಯ ಕರೆಗೆ ದೇಶದಲ್ಲೇ ದೊಡ್ಡ ಆಂದೋಲನವಾಯಿತು. ಬೆಂಗಳೂರಿಗೆ ಒಂದು ಸುಂಟರಗಾಳಿಯೇ ಬೀಸಿತು. 1942 ಆಗಸ್ಟ್ 9ರಂದು ದೇಶದ ನಾಯಕರನೆಲ್ಲಾ ದಸ್ತಗಿರಿ ಮಾಡಿದಂತೆ ಹಳೇ ಮೈಸೂರು ನಾಯಕರನ್ನು ಮತ್ತು ಬೆಂಗಳೂರಿನ ಎಲ್ಲಾ ಪ್ರಮುಖರನ್ನು ದಸ್ತಗಿರಿ ಮಾಡಿದರು. ಉಳಿದವರು ಯುವಕರು ಮತ್ತು ವಿದ್ಯಾರ್ಥಿಗಳು.

ಚಳವಳಿ ಹೊರಗಡೆ ಒಂದು ರೀತಿಯಾಗಿ ನಡೆದರೆ, ಅನೇಕರು ಭೂಗತರಾಗಿ ಚಳವಳಿಗೆ ಜೀವ ತುಂಬುತ್ತಿದ್ದರು. ಭೂಗತ ಪತ್ರಿಕೆಗಳು ಪ್ರಾರಂಭವಾದವು. ಸುಖತೀರ್ಥ ವ್ಯಾಸತೀರ್ಥರವರು ಮೊದಲು ಮಲ್ಲೇಶ್ವರದಲ್ಲಿ ಭೂಗತ ಪತ್ರಿಕೆ ಪ್ರಾರಂಭಿಸಿದರು. ಬಸವನ ಗುಡಿಯಲ್ಲಿ ಡಾ. ಎಚ್. ನರಸಿಂಹಯ್ಯನವರ ಗುಂಪಿನಿಂದ ಪತ್ರಿಕೆಗಳು ಹೊರಬರುತ್ತಿದ್ದವು. ಅವುಗಳನ್ನು ಹಂಚುವುದೇ ನಮ್ಮ ಕೆಲಸವಾಗಿತ್ತು. ನಂತರ ನನ್ನ ಮಿತ್ರ ಲಕ್ಷ್ಮೀನರಾಯಣ; ಗೋಪಾಲಕೃಷ್ಣ ನಾನು ಸೇರಿ, ಪೊಲೀಸ್ ಸ್ಟೇಷನ್ ಪಕ್ಕದಲ್ಲೆ ಒಂದು ಕಲ್ಲಚ್ಚು ಪತ್ರಿಕೆ ಪ್ರಾರಂಭಿಸಿದೆವು. ಆಗ ಯಂತ್ರಗಳಿರಲಿಲ್ಲ ಕೈಯಲ್ಲಿ ಒತ್ತಬೇಕಾಗಿತ್ತು. ರಾತ್ರಿ ಮನೆಮನೆ ಹಂಚುತ್ತಿದ್ದೆವು.

ಬೆಂಗಳೂರಿನ ನಾಯಕರಾದ ಕೆ. ಹನುಮಂತಯ್ಯನವರು 1933ರಿಂದಲೇ ಸಾರ್ವಜನಿಕ ಸೇವೆ ಸಲ್ಲಿಸಿದವರು. 1938ರ ಶಿವಪುರ ಧ್ವಜ ಸತ್ಯಾಗ್ರಹದಲ್ಲಿ ಭಾಗವಹಿಸಿ ಸೆರೆಮನೆ ವಾಸ ಅನುಭವಿಸಿದರು. 1940ರಲ್ಲಿ ಬೆಂಗಳೂರು ಪೌರಸಭೆಗೆ ಸದಸ್ಯರಾಗಿ 1943ರಲ್ಲಿ ಅಧ್ಯಕ್ಷರಾದರು. ಚಳವಳಿ ಕಾಲದಲ್ಲಿ ಚಿಕ್ಕ ಲಾಲ್‌ಬಾಗಿನಲ್ಲಿ ಭಾಷಣ ಮಾಡಿದ್ದಕ್ಕೆ ದಸ್ತಗಿರಿ ಮಾಡಿದರು. 'ಮೈಸೂರು ಚಲೋ' ದಲ್ಲಿ ಭಾಗವಹಿಸಿ ದಸ್ತಗಿರಿಯಾದರು. 1942ರ ಚಳವಳಿಯಲ್ಲಿ ಅನೇಕ ಮಹಿಳೆಯರು ಸಕ್ರಿಯವಾಗಿ ಪಾತ್ರವಹಿಸಿದರು. ಕೆಲವು ಹೆಸರಗಳನ್ನು ಹೇಳುವುದಾದರೆ ಕುಂತಳ ಸೇತೂರಾವ್, ಕಾಮಾಕ್ಷಮ್ಮ, ಲಕ್ಷ್ಮಮ್ಮ ಇನ್ನು ಅನೇಕ ಹೆಣ್ಣುಮಕ್ಕಳು ತ್ಯಾಗಮಾಡಿ ಜೈಲು ಶಿಕ್ಷೆ ಅನುಭವಿಸಿದ್ದಾರೆ.

1942ರಲ್ಲಿ ಅರಳೇಪೇಟೆಯ ಪೋಸ್ಟ್ ಆಫೀಸಿಗೆ ಬೆಂಕಿ ಹಚ್ಚಿದರು. ಕೆಂಗೇರಿ ಪೊಲೀಸ್ ಸ್ಟೇಷನ್‌ಗೆ ಮುತ್ತಿಗೆ ಹಾಕಿ ಕಟ್ಟಡವನ್ನು ಕೆಡವಿದರು. ಆರ್ಕಾಟ್ ಶ್ರೀನಿವಾಸಾಚಾರ್ ರಸ್ತೆಯ ಸಿಟಿ ಪೊಲೀಸ್ ಸ್ಟೇಷನ್‌ಗೆ ಬೆಂಕಿ ಹಚ್ಚಿದರು. ಪೊಲೀಸರ ಬಟ್ಟೆ ಹರಿದರು. ಟೆಲಿಫೋನ್ ಮತ್ತು ಟೆಲಿಗ್ರಾಂ ಕಂಬಿಗಳು ಒಂದೂ ಇರುತ್ತಿರಲಿಲ್ಲ. ಆಗಿನ ಚಳವಳಿಯಲ್ಲಿ ಸತ್ತವರ ಸಂಖ್ಯೆ 9.

ಭಾರತ ಸ್ವತಂತ್ರವಾದದ್ದು 15 ಆಗಸ್ಟ್ 1947. ಆದರೆ ಮೈಸೂರು ಸಂಸ್ಥಾನದಲ್ಲಿ ಜವಾಬ್ದಾರಿ ಸರಕಾರ ಬರಲಿಲ್ಲ ದಿವಾನ್ ಆರ್ಕಾಟ್ ರಾಮಸ್ವಾಮಿ ಮೊದಲಿಯಾರ್ ಮಹಾರಾಜರಿಗೆ ಸರಿಯಾದ ಸಲಹೆ ಕೊಡಲಿಲ್ಲ. 1947ನೇ ಆಗಸ್ಟ್ 15ರಂದು ಅವರ ಅರಮನೆಯ ಮೇಲಾಗಲಿ; ಸರ್ಕಾರಿ ಕಚೇರಿಗಳ ಮೇಲಾಗಲಿ ರಾಷ್ಟ್ರಧ್ವಜವನ್ನು ಹಾರಿಸಲಿಲ್ಲ. ಆದರೆ ಅಠಾರ ಕಚೇರಿಯ ಮೇಲೆ (ಈಗ ಹೈಕೋರ್ಟ್) ಇಬ್ಬರು ಧೀಮಂತ ಕಾರ್ಮಿಕರು ರಾಷ್ಟ್ರಧ್ವಜವನ್ನು ಹರಿಸಿಯೇಬಿಟ್ಟರು.

ಸೆಪ್ಟೆಂಬರ್‌ನಲ್ಲಿ ಕೆ.ಸಿ.ರೆಡ್ಡಿಯವರ ನಾಯಕತ್ವದಲ್ಲಿ ಬೆಂಗಳೂರು ಸುಭಾಷ್‌ನಗರ ಮೈದಾನ(ಈಗ ಬಸ್ ನಿಲ್ದಾಣ) ದಲ್ಲಿ ಭಾರಿ ಸಭೆ ಸೇರಿಸಿದರು. ಲಕ್ಷಕ್ಕೂ ಹೆಚ್ಚು ಜನ ಆಗಿನ ಕಾಲದಲ್ಲಿ ಸೇರಿದರು. ಭಾಷಣಗಳಾದ ಮೇಲೆ ರಾಷ್ಟ್ರಧ್ವಜ ಹಿಡಿದು 'ಮೈಸೂರು ಚಲೋ' ಸತ್ಯಾಗ್ರಹಕ್ಕೆ ಕಹಳೆ ಕೂಗಿದರು.

'ಮೈಸೂರು ಚಲೋ' ಚಳವಳಿಯನ್ನು ನಿಲ್ಲಿಸಲು ಸಾಧ್ಯವಾಗಲೂ ಇಲ್ಲ. ಸರಕಾರ ನಡೆಸುವುದೇ ಕಷ್ಟವಾಯಿತು. ಈ ಚಳವಳಿ ಮಹಾರಾಜರ ವಿರುದ್ಧವಿರಲಿಲ್ಲ. ಆದರೆ ಅವರ ಆಶ್ರಯದಲ್ಲಿ ಪ್ರಜಾಪ್ರಭುತ್ವ ಜವಾಬ್ದಾರಿ ಆಡಳಿತವಾಬೇಕೆಂಬುದೇ ಗುರಿಯಾಗಿತ್ತು. ಆರ್ಕಾಟ್ ರಾಮಸ್ವಾಮಿ ಮೊದಲಿಯರ್‌ರವರಿಗೆ, ಬಿಡಿಸಲಾಗದ ಸಮಸ್ಯೆ ಅರಿವಾಗಿ ಶರಣಾಗತರಾಗಿ ಮೈಸೂರು ಕಾಂಗ್ರೆಸ್‌ನ ನಾಯಕರೊಡನೆ ಚರ್ಚಿಸಿ ಕೆ.ಸಿ.ರೆಡ್ಡಿಯವರೊಡನೆ ಸಂದಾನ ಮಾಡಿಕೊಳ್ಳಲು ಒಪ್ಪಂದವಾಗಿದ್ದರಿಂದ ಚಳಚಳಿ ನಿಂತಿತು. ಮೊದಲ ಜವಾಬ್ದಾರಿ ಸರಕಾರದ ಮಂತ್ರಿ ಮಂಡಲ ರಚನೆ ಆಗಿ ಅಧಿಕಾರ ಸ್ವೀಕರಿಸಿದ ಸ್ಥಳ ಬೆಂಗಳೂರಿನ ಅಠಾರ ಕಚೇರಿ. (ಈಗ ಹೈಕೋರ್ಟು)





# ಸಾವಿಲ್ಲ, ಮಹಾಪುರುಷರಿಗೆ



**ಗಾಯತ್ರಿ**

ಸರಿಯಾಗಿ ನೂರು ವರ್ಷಗಳ ಹಿಂದೆ (1913) ಕವಿ ರವೀಂದ್ರನಾಥ ಠಾಕೂರರಿಗೆ ವಿಶ್ವ ವಿಖ್ಯಾತ ನೊಬೆಲ್‌ಪ್ರಶಸ್ತಿ ಸಂದಿತು. ಭಾರತಕ್ಕೆ ಲಭಿಸಿದ ಮೊದಲ ನೊಬೆಲ್ ಪುರಸ್ಕಾರವದು. ದೇಶಕ್ಕೇ ಸಂದಗೌರವ. ಅವರ ಗೀತಾಂಜಲಿ ಕಾವ್ಯವನ್ನು ಓದಿ ವಿಶ್ವದ ವಿದ್ವಾಂಸರು ಅಚ್ಚರಿಗೊಂಡರು. ಸಾಹಿತ್ಯದ ಕಾಶಿ ಇಂಗ್ಲೆಂಡ್ ಮತ್ತಿತರ ಕಡೆಗಳಲ್ಲಿ ಗೀತಾಂಜಲಿ ಕಾವ್ಯ ರಸಿಕರ ಕೈಗಳಲ್ಲಿ ವಿಜೃಂಭಿಸಿತು. ಬ್ರಿಟಿಷ್ ಆಳ್ವಿಕೆಯಲ್ಲಿದ್ದ ಭಾರತದ ಬಗೆಗೆ ತಿರಸ್ಕಾರವಿದ್ದ ಸಂದರ್ಭದಲ್ಲಿ 'ಗೀತಾಂಜಲಿ' ಜಗತ್ತನ್ನೇ ಬೆರಗುಗೊಳಿಸಿತು.

ಮಹಾತ್ಮಗಾಂಧಿ ಅವರಿಂದಲೇ ಗುರುದೇವ ಎಂದು ಕರೆಸಿಕೊಂಡ ರವೀಂದ್ರನಾಥ್ ಠಾ–ಕೂರ್ ನಮ್ಮ ದೇಶದ ಮಹಾಪುರುಷರಲ್ಲಿ ಒಬ್ಬರು. ಅವರ ಕಾವ್ಯ, ರಾಷ್ಟ್ರಪ್ರೇಮ, ವೈಜ್ಞಾನಿಕ ದೃಷ್ಟಿ, ಗುರುಕುಲ ಶಿಕ್ಷಣ ಪದ್ಧತಿ ಜಗತ್ತಿನಲ್ಲೇ ಮನೆ ಮಾತಾಗಿದೆಯಲ್ಲದೆ ಅವರ ಅಪ್ರತಿಮ ಪ್ರತಿಭೆ, ವೈಚಾರಿಕ ದೃಷ್ಟಿಕೋನಕ್ಕೆ ಸಾಕ್ಷಿಯಾಗಿ, ದೃಢವಾಗಿ ನಿಂತಿದೆ ಶಾಂತಿನಿಕೇತನ, ವಿಶ್ವಭಾರತಿ ವಿಶ್ವ ವಿದ್ಯಾಲಯ. ಶಾಂತಿನಿಕೇತನದಲ್ಲಿ ಕಲಿಯಲು ಹೋಗುವುದು ಬದುಕಿನ ಮಹತ್ಸಾಧನೆ ಎಂದು ಭಾವಿಸುವುದರೊಂದಿಗೆ ಅದೊಂದು ಯಾತ್ರಾ ಸ್ಥಳವಾಗಿದೆ. ಇದಕ್ಕಾಗಿ ತಮ್ಮ ಸರ್ವಸ್ವವನ್ನು ಎರೆದರು. ಜ್ಞಾನ ವಿಕಸನ ಕೇಂದ್ರವಾದ ವಿಶ್ವಭಾರತಿಯ ರೂವಾರಿ ರವೀಂದ್ರನಾಥ್ ಠಾಕೂರರ ಬದುಕೇ ಒಂದು ಆದರ್ಶ, ಅನುಕರಣೀಯ.

ರವೀಂದ್ರರಿಗೆ ಜಗತ್ತಿನ ಜ್ಞಾನ ಸಂಪತ್ತನ್ನು ಆವಾಹಿಸಿಕೊಳ್ಳಬೇಕೆಂಬ ತವಕ. ಬಂಗಾಳಿ, ಇಂಗ್ಲೀಷ್, ಸಂಸ್ಕೃತವಲ್ಲದೆ ವಿಶ್ವದ ವಿವಿಧ ಭಾಷೆಗಳ ವಿಖ್ಯಾತ ಸಾಹಿತ್ಯ ಅಧ್ಯಯನ ಅವರ ಜೀವನದ ಪರಮಧ್ಯೇಯವಾಗಿತ್ತು. ಹೀಗಾಗಿ ಜ್ಞಾನಾರ್ಜನೆಗೆ ಹೆಚ್ಚು ಮಹತ್ವ ನೀಡಿದರು. ಹೆನ್ರಿ ಮಾರ್ಲಿ ಎಂಬ ಅವರ ಇಂಗ್ಲೀಷ್ ಅಧ್ಯಾಪಕ, ಇಂಗ್ಲೆಂಡಿನಲ್ಲಿ, ರವೀಂದ್ರರ ಸಾಹಿತ್ಯ ಸೊಬಗನ್ನು ಮೆಚ್ಚಿಕೊಂಡು ಇತರ ವಿದ್ಯಾರ್ಥಿ ಹಾಗೂ ಸಾಹಿತ್ಯಾಸಕ್ತರ ಮುಂದೆ ಕೊಂಡಾಡಿದ್ದರು. ಸಾಹಿತ್ಯ, ಸಂಗೀತ ಹಾಗೂ ಶಿಕ್ಷಣ ಕ್ಷೇತ್ರಕ್ಕೆ ರವೀಂದ್ರರ ಕೊಡುಗೆ ಅಪರಿಮಿತ. ರವೀಂದ್ರ ಸಂಗೀತ ಇಂದು ಜಗತ್ ಖ್ಯಾತಿ ಪಡೆದಿದೆ. ಸಾಹಿತ್ಯ ಜ್ಞಾನದ ಜೊತೆಗೆ ಮಧುರ ಕಂಠ ಅವರದಾಗಿತ್ತು. 70 ವಯಸ್ಸಿನಲ್ಲಿಯೂ ಅವರದು ಕಂಚಿನ ಕಂಠವಾಗಿತ್ತು. ಅವರ ಅದ್ಭುತ ಗಾಯನ ಕೇಳಿ ಭಾರತೀಯರು ಇರಲಿ, ಭಾಷೆ ತಿಳಿಯದ ವಿದೇಶಿಯರೂ ಮಂತ್ರ ಮುಗ್ಧರಾಗುತ್ತಿದ್ದರು. ಗಾಯನದಲ್ಲಿ ನವನೂತನ ವೈಖರಿ ನೀಡಿದ್ದೇ ಅದಕ್ಕೇ ಕಾರಣ.

ರವೀಂದ್ರರದು ಅಪ್ಪಟ ದೇಶಾಭಿಮಾನ. ಸ್ವಾತಂತ್ರ್ಯ ಹೋರಾಟದಲ್ಲಿ ಸಕ್ರಿಯವಾಗಿ ಪಾಲ್ಗೊಂಡದ್ದು ಹೆಚ್ಚಾಗಿಲ್ಲದಿರಬಹುದು. ಆದರೆ ಅಗತ್ಯ ಸಂದರ್ಭಗಳಲ್ಲಿ ಅವರು ತಮ್ಮ ಪ್ರತಿಭಟನೆಯ ದನಿಯನ್ನು ಏರಿಸಿದ್ದು ಇದೆ. ಬಂಗಾಳ ವಿಭಜನೆಯಾದಾಗ ತೀವ್ರ ವಿರೋಧ ವ್ಯಕ್ತವಾದಾಗ ರವೀಂದ್ರರು ಕೂಡ ಆದರಲ್ಲಿ ಭಾಗವಹಿಸಿದ್ದರು. ಜಲಿಯನ್ ವಾಲಾಬಾಗ್ ಹತ್ಯಾಕಾಂಡ ಅವರ ರಕ್ತ ಕುದಿಯುವಂತೆ ಮಾಡಿತು. ಬ್ರಿಟಿಷ್ ಸರ್ಕಾರದ ಈ ಕ್ರೂರ ಕೃತ್ಯದಿಂದ ಕುಪಿತಗೊಂಡು ತಮಗೆ ನೀಡಿದ್ದ 'ನೈಟ್‌ಹುಡ್'ಪ್ರಶಸ್ತಿ ಪದಕವನ್ನು ವಾಪಸ್ ಕಳುಹಿಸಿದ ದೇಶಾಭಿಮಾನಿ. ರಾಷ್ಟ್ರಗೀತೆಯಾಗಿರುವ 'ಜನಗಣಮನ ಅಧಿನಾಯಕ ' ರವೀಂದ್ರರ ರಾಷ್ಟ್ರ ಪ್ರೇಮಕ್ಕೊಂದು ನಿದರ್ಶನ.

ಮಹರ್ಷಿ ದೇವೇಂದ್ರನಾಥ ಠಾಕೂರ ಮತ್ತು ಶಾರದಾದೇವಿ ದಂಪತಿಯ 14ನೇ ಮಗನಾಗಿ ರವೀಂದ್ರನಾಥ ಠಾಕೂರರ ಜನನ 1861ರ ಮೇ 7ರಂದು ಕೋಲ್ಕತ್ತಾದಲ್ಲಿ. ಅವರ ನಂತರ ಈ ದಂಪತಿಗೆ ಮತ್ತೊಂದು ಮಗನಾದರೂ ಒಂದು ವರ್ಷದಲ್ಲಿಯೇ ಸಾವಿಗೀಡಾಯಿತು. ಹೀಗಾಗಿ, ರವೀಂದ್ರರು ದೊಡ್ಡ ಕುಟುಂಬದ ಕೊನೆಯ ಮುದ್ದು ಕುವರನಾಗಿ ಬೆಳೆದರು.

1883ರಲ್ಲಿ ರವೀಂದ್ರರು ಕಾರವಾರದಲಿ ಜಿಲ್ಲಾ ನ್ಯಾಯಾಧೀಶರಾಗಿದ್ದ ಅಣ್ಣ ಸತ್ಯೇಂದ್ರನಾಥರನ್ನು ಜೊತೆಗಿದ್ದ ಸಮಯದಲ್ಲಿ ಅಲ್ಲಿನ ಅತ್ಯಂತ ಸುಂದರವಾದ, ಅರ್ಧಚಂದ್ರಾಕಾರದ ಕಡಲತೀರದಿಂದ ಆಕರ್ಷಿತಗೊಂಡರು. ಪ್ರಕೃತಿಯ ಆರಾಧಿಸುವ ರವೀಂದ್ರರನ್ನು ಬಹುವಾಗಿ ಅಕರ್ಷಿಸಿತು. ಇಂಥ ಮುದ ನೀಡುವ ವಾತಾವರಣದಲ್ಲಿ ಅವರು 'ಪ್ರಕೃತೀರ್ ಪರಿಶೋಧ' ಎಂಬ ಮಹತ್ವದ ನಾಟಕ ರಚಿಸಿದರು. ಮುಂದೆ ಅದು 'ಸನ್ಯಾಸಿ' ಎಂಬ ಹೆಸರಿನಲ್ಲಿ ಇಂಗ್ಲಿಷನಲ್ಲಿ ಪ್ರಕಟವಾಯಿತು.

ಠಾಕೂರ ಮನೆತನದ ಎಸ್ಟೇಟಿನಲ್ಲಿ ಕೆಲಸ ಮಾಡುತ್ತಿದ್ದ ವೇಣುಮಾಧವ ರಾಯ್ ಚೌಧರಿ ಪುತ್ರಿ 10 ವರ್ಷದ ಭವತಾರಿಣಿ ಜೊತೆ ರವೀಂದ್ರ ವಿವಾಹ ನೆಡೆಯಿತು. ಸಾಮಾನ್ಯ ಕುಟುಂಬದ ಈ ವಧು ಮುಂದೆ ರವೀಂದ್ರರಿಗೆ ಅತ್ಯುತ್ತಮ ಸಂಗಾತಿಯಾಗಿ ಎಲ್ಲ ರೀತಿಯಲ್ಲಿಯೂ ತಮ್ಮ ಕರ್ತವ್ಯ ನಿರ್ವಹಿಸಿದರು. ವಿವಾಹ ಬಳಿಕ ಭವತಾರಿಣಿ ಹೆಸರನ್ನು ಮೃಣಾಲಿನಿ ಎಂದಾಯಿತು. ಮಾಧುರಿಲತಾ (ಬೇಲಾ) ರತೀಂದ್ರ, ರೇಣುಕಾ, ಮೀರಾ ಹಾಗೂ ಸಮೀಂದ್ರನಾಥ. ರಾಷ್ಟ್ರೀಯ ಕಾಂಗ್ರೆಸಿನ ಮೊದಲ ವಾರ್ಷಿಕ ಅಧಿವೇಶನ ಕೋಲ್ಕತ್ತಾದಲ್ಲಿ ನಡೆಯಿತು. ದಾದಾಭಾಯಿ ನವರೋಜಿ ಅಧ್ಯಕ್ಷತೆ. ಆ ಸಂದರ್ಭದಲ್ಲಿ ರವೀಂದ್ರರು ಗೀತೆ ರಚಿಸಿ, ರಾಗ ಸಂಯೋಜನೆ ಮಾಡಿ ಹಾಡಿದ್ದು ವಿಶೇಷ. 'ಒಂದೇ ತಾಯಿಯ ಮಕ್ಕಳು ನಾವು ಇಲ್ಲಿ ಸೇರಿದ್ದೇವೆ' ಎಂಬರ್ಥ ಕೊಡುವ ಈ ಗೀತೆ ಎಲ್ಲರ ಮೆಚ್ಚುಗೆ ಪಡೆಯಿತು. ಮುಂದೆ ರವೀಂದ್ರರ ಲೇಖನಿಯಿಂದ ದೇಶಭಕ್ತಿ ಗೀತೆಗಳ ಮಹಾಪೂರವೇ ಹರಿದು ಬಂದಿತು.

ತಿಲಕರ ಸಾರ್ವಜನಿಕ ಗಣೇಶೋತ್ಸವದಿಂದ ರವೀಂದ್ರರು ಆಕರ್ಷಿತರಾಗಿದ್ದರು. ಬಂಗಾಳದಲ್ಲಿ ಅಂತಹ ಘಟನೆಗಳು ನಡೆದವು. ಇಲ್ಲಿಯೂ ಜನಜಾಗೃತಿಗಾಗಿ ಅನೇಕ ಉತ್ಸವಗಳನ್ನು ಬಳಸಿಕೊಳ್ಳಲಾಯಿತು. 'ವೀರಾಷ್ಟಮಿ', 'ಪ್ರತಿಪಾದಿತ್ಯ' ಅವುಗಳಲ್ಲಿ ಕೆಲವು. ಆಗ ಕೋಲ್ಕತಾದಲ್ಲಿ ವಾಸವಾಗಿದ್ದ ಮರಾಠಿ ಸಾಹಿತಿ, ಪತ್ರಕರ್ತ ಸಖಾರಾಮ

ರವೀಂದ್ರರು ಕೊಲ್ಕತ್ತಾದಲ್ಲಿ ಕಾಂಗ್ರೆಸ್‌ನ 12ನೆಯ ಅಧಿವೇಶನ ನಡೆದಾಗ ಬಂಕಿಮಚಂದ್ರರ 'ವಂದೇಮಾತರಂ' ಗೀತೆಗೆ ರಾಗ ಹಾಕಿದರು. ಈ ಗೀತೆ ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಮಹತ್ವದ ಪಾತ್ರ ವಹಿಸಿದ್ದು ಈಗ ಇತಿಹಾಸ. ದೇಶ ಬಾಂಧವರಲ್ಲಿ ರಾಷ್ಟ್ರೀಯತೆಯನ್ನು ಉಕ್ಕಿ ಹರಿಸಿದ ಗೀತೆ ಇದು. ಬ್ರಿಟಿಷ್ ಸರ್ಕಾರ ಆಗಲೇ ರಾಜ ದ್ರೋಹಕಾಯಿದೆ ತಂದದ್ದು.

ದೇವೂಸ್ಕರ್ 'ಶಿವಾಜಿ ದೀಕ್ಷಾ.' ಎಂಬ ಪುಸ್ತಕವನ್ನು ಬಂಗಾಲಿ ಭಾಷೆಯಲ್ಲಿ ಪ್ರಕಟಿಸಿದರು. ರವೀಂದ್ರರು ಇದಕ್ಕಾಗಿ ಒಂದು ಸುದೀರ್ಘ ಕವಿತೆ ಬರೆದಿದ್ದರು. ಸ್ಫೂರ್ತಿ ತುಂಬಿದ ಕವಿತೆ ಓದಿ ಕೋಲ್ಕತ್ತಾ ಜನರೇ ದಂಗಾಗಿ ಹೋದರು. ಸ್ವಾತಂತ್ರ್ಯದ ಕಹಳೆ ಅವರನ್ನು ಬಡಿದೆಬ್ಬಿಸುವಂತಿತ್ತು. ಈ ಮಧ್ಯೆ ಬಂಗಾಲದ ವಿಭಜನೆ ಎಲ್ಲರ ಮನ ಕುದಿಯುವಂತೆ ಮಾಡಿತು 'ವಿಭಜಿಸಿ ಆಳಿ' ಎಂಬ ತಮ್ಮ ಸೂತ್ರಕ್ಕೆ ತಕ್ಕಂತೆ ಬ್ರಿಟಿಷರು ಹಿಂದೂ ಮುಸ್ಲಿಮರ ಮಧ್ಯೆ ಒಡಕು ಉಂಟು ಮಾಡಲು ಯತ್ನಿಸಿದ್ದರ ಫಲ ಈ ವಿಭಜನೆ. ಬಂಗಾಲ ವಿಭಜನೆ ವಿರುದ್ಧ ತೀವ್ರ ಪ್ರತಿಭಟನೆ ನಡೆದವು. ರವೀಂದ್ರರು ಇದರಲ್ಲಿ ಸಕ್ರಿಯವಾಗಿದ್ದರು. ದೇಶಭಕ್ತಿಗೀತೆ ರಚನೆ, ಸ್ಫೂರ್ತಿದಾಯಕ ಭಾಷಣ ಹಾಗೂ ಸ್ವದೇಶಾಭಿಮಾನ ಜಾಗೃತಿ ಮೂಲಕ ರವೀಂದ್ರರು ಸಾರ್ವಜನಿಕ ವಲಯದಲ್ಲಿ ಛಾಪು ಮೂಡಿಸಿದರು. ಅ ಸಂದರ್ಭದಲ್ಲಿ ಅವರು ಬರೆದ 'ಆಮಾರ್ ಸೋನಾ ಬಾಂಗ್ಲಾ' ಈಗ ಬಾಂಗ್ಲಾದೇಶದ ರಾಷ್ಟ್ರಗೀತೆ.

ದಕ್ಷಿಣ ಆಫ್ರಿಕಾದಲ್ಲಿ ಗಾಂಧೀಜಿಯವರು ನಡೆಸುತ್ತಿದ್ದ ಫೀನಿಕ್ಸ್ ಆಶ್ರಮದ ವಿದ್ಯಾರ್ಥಿಗಳಿಗೆ ಶಾಂತಿನಿಕೇತನದಲ್ಲಿ ಆಶ್ರಯ ಕೊಡಬೇಕೆಂಬ ಆಂಡ್ರೂಸ್ ಮನವಿಗೆ ರವೀಂದ್ರರು ತಕ್ಷಣ ಒಪ್ಪಿದರು, ಉಭಯ ಆಶ್ರಮದ ವಿದ್ಯಾರ್ಥಿಗಳು ಸಹಬಾಳ್ವೆ ನಡೆಸಲು ಒಳ್ಳೆಯ ಅವಕಾಶ ಎಂದು ರವೀಂದ್ರರು ಭಾವಿಸಿದರು. ಅಲ್ಲದೆ ಸತ್ಯ ಅಹಿಂಸೆಯ ನೆಲೆ ಮೇಲೆ ತಮ್ಮ ರಾಜಕೀಯ ಕ್ಷೇತ್ರ ಬಲ ಪಡಿಸುತ್ತಿರುವ ಗಾಂಧೀಜಿ ಮೈತ್ರಿ ತಮಗೆ ಲಭಿಸೀತೆಂಬ ಆಶಯವೂ ಅವರಲ್ಲಿ ಮೂಡಿತು. 1914ರ ನವೆಂಬರ್ ನಲ್ಲಿ ಫೀನಿಕ್ಸ್ ವಿದ್ಯಾರ್ಥಿಗಳು ಆಂಡ್ರೂಸ್ ಜೊತೆ ಶಾಂತಿನಿಕೇತನಕ್ಕೆ ಬಂದರು. ಶಾಂತಿನಿಕೇತನ ವಿದ್ಯಾರ್ಥಿಗಳು ಸದಾ ಆಡುತ್ತಾ ನಲಿಯುತ್ತದ್ದರೆ ಫೀನಿಕ್ಸ್ ಮಕ್ಕಳು ಗಂಭೀರವಾಗಿರುತ್ತಿದ್ದರು. ಉಭಯತ್ರರು ಜತೆಗೂಡಿದಾಗ ಪರಸ್ಪರ ಎರಡೂ ರೀತಿ ವಿನಿಮಯವಾಯಿತು.

1915 ರ ಮಾರ್ಚ್‌ನಲ್ಲಿ ಗಾಂಧೀಜಿ ಶಾಂತಿನಿಕೇತನಕ್ಕೆ ಬಂದಾಗ ರವೀಂದ್ರರ ಜೊತೆ ಒಂದು ವಾರವಿದ್ದರು. ಇಬ್ಬರು ಮಹಾಪುರುಷರ ಈ ಮಿಲನ ಅಪೂರ್ವವಾಗಿತ್ತು. ಮತ್ತು ಇಬ್ಬರ ಮೈತ್ರಿ ಗಾಢವಾಗುತ್ತಾ ಹೋಯಿತು. ಗಾಧೀಜಿ ಮಹಾತ್ಮರಾದರೆ ರವೀಂದ್ರರು ಗುರುದೇವರಾದರು.

**ಚಳವಳಿಗೆ ಸ್ಪಂದನೆ**

ಇತ್ತ ಭಾರತದ ಪರಿಸ್ಥಿತಿ ಬಿಗಡಾಯಿಸತೊಡಗಿತು. ಸ್ವಾತಂತ್ರ್ಯ ಚಳವಳಿಯನ್ನು ಬಗ್ಗುಬಡಿಯಲು ಸರ್ಕಾರ ಉಗ್ರ ಕ್ರಮ ಕೈಗೊಂಡಿತು. ಹೋರಾಟದಲ್ಲಿ ಧುಮುಕಿದ್ದ ಭಾರತೀಯ ಯುವಕರ ಮೇಲೆ ಪ್ರಹಾರ ಮಾಡುತ್ತ ಚಳವಳಿಯನ್ನು ತುಳಿಯುತ್ತಿತ್ತು. ಬ್ರಿಟಿಷರ ಈ ಕ್ರಮದ ವಿರುದ್ಧ ಹೋಂ ರೂಲ್ ಆಂದೋಲನ ನಾಯಕಿ ಅನಿಬೆಸೆಂಟ್ ತೀವ್ರವಾಗಿ ಪ್ರತಿಭಟಿಸಿದಾಗ ಅವರನ್ನು ಬಂಧೀಸಲಾಯಿತು. ಅವರ ಕಾರ್ಯಶೀಲತೆಯನ್ನು ಗಮನಿಸುತ್ತಿದ್ದ ರವೀಂದ್ರರಿಗೆ ಈಗ ಸುಮ್ಮನಿರುವುದು ಸಾಧ್ಯವಿತ್ತೇ? ಇದನ್ನು ಪ್ರತಿಭಟಿಸಿ ಅನೇಕ ಕಡೆ ಭಾಷಣಗಳನ್ನು ಮಾಡಿ ಸರ್ಕಾರದ ನೀತಿಯನ್ನು ಖಂಡಿಸಿದರು.

ಇತಿಹಾಸ ಪುಟಗಳಲ್ಲಿ ರಕ್ತಾಕ್ಷರಗಳಲ್ಲಿ ಬರೆದಿರುವ ಜಲಿಯನ್‌ವಾಲಾಬಾಗ್ ಹತ್ಯಾಕಾಂಡದಿಂದ ಭಾರತೀಯರ ನೆತ್ತರ ಕುದಿಯಿತು. ರವೀಂದ್ರರು ತಮ್ಮ ನೈಟ್ ಹುಡ್ ಗೌರವವನ್ನು ಹಿಂತಿರುಗಿಸಿ ಪ್ರತಿಭಟನೆ ವ್ಯಕ್ತಪಡಿಸಿದ್ದು ಈಗ ಇತಿಹಾಸ. ಅದು ಭಾರತೀಯರ ಮೇಲೆ ಮಾಡಿದ ಪರಿಣಾಮ ಮಾತ್ರ ಅಪಾರ. ಬ್ರಿಟಿಷರ ರಾಕ್ಷಸೀ ಪ್ರವೃತ್ತಿಯಿಂದ ಬೇಸತ್ತಿದ್ದ, ಹೆದರಿದ್ದ ಭಾರತೀಯರಿಗೆ, ಹೋರಾಟಗಾರರಿಗೆ ಇದು ಆತ್ಮಗೌರವವನ್ನು ತಂದುಕೊಟ್ಟಿತು. ಬ್ರಿಟಿಷ್ ಸಾಮ್ರಾಜ್ಯಪತ್ಯ ನೀಡಿದ್ದ ಗೌರವವನ್ನು ಈ ರೀತಿ ತಿರಸ್ಕರಿಸಿದ್ದು ಸಾಮಾನ್ಯವಲ್ಲ!



ಗಾಂಧೀಜಿ ನೇತೃತ್ವದಲ್ಲಿ ಸ್ವಾತಂತ್ರ್ಯ ಸಂಗ್ರಾಮ ನವೋತ್ಸಾಹ ಪಡೆಯಿತು. ಸ್ವದೇಶ ಚಳವಳಿ ಉತ್ತುಂಗದಲ್ಲಿತ್ತು. ವಿದೇಶಿ ವಸ್ತ್ರ ನಾಶ ಪಡಿಸಿ ಚರಕದಿಂದ ನೂಲು ತೆಗೆದು ಖಾದಿ ಉತ್ಪಾದಿಸಲು ಗಾಂಧಿ ಕರೆ ನೀಡಿದ್ದರು. ಗ್ರಾಮೋದ್ಯೋಗಗಳ ಪುನರುತ್ಥಾನಕ್ಕೆ ಶ್ರೀನಿಕೇತನ ಆರಂಭಿಸಿದ್ದರೂ ರವೀಂದ್ರರಿಗೆ ನೂಲುವುದರಿಂದಲೇ ಜನರ ಕಷ್ಟ ಪರಿಹಾರ ಕಂಡೀತೆಂಬ ನಂಬಿಕೆ ಇರಲಿಲ್ಲ. ಇದರಿಂದಾಗಿ ಮಹಾತ್ಮ ಮತ್ತು ಗುರುದೇವರ ಮಧ್ಯೆ ವೈಚಾರಿಕ ಸಂಘರ್ಷ ಶುರುವಾಯಿತು. ನಮ್ಮ ಬೆಳವಣಿಗೆಗೆ ಪೂರ್ವ ಪಶ್ಚಿಮಗಳ ಸಹಕಾರ ಅಗತ್ಯವೆಂಬ ಅವರ ಭಾಷಣಕ್ಕೆ ವಿರೋಧ ವ್ಯಕ್ತವಾಗಿತ್ತು. ವಿವಿಧ ವೇದಿಕೆಗಳಲ್ಲಿ ಗಾಂಧಿ ಮತ್ತು ರವೀಂದ್ರರ ನಡುವಣ ಸಂಘರ್ಷ ಮುಂದುವರಿದಿತ್ತು. ಇಬ್ಬರೂ ಭೇಟಿಯಾಗಿ ಮಾತಾಡಿದರೂ ತಮ್ಮ ತಮ್ಮ ನಿಲುವಿಗೇ ಅಂಟಿಕೊಂಡರು.

ಗುರುದೇವರಿಗೆ ತಮ್ಮ ಅಂತ್ಯ ಸಮೀಪಿಸುತ್ತಿದೆ ಎಂದು ಭಾಸವಾಯಿತು. ತಾನು ಕಟ್ಟಿ ಬೆಳೆಸಿ ವಿಶ್ವಭಾರತಿಯ ಭವಿಷ್ಯದ ಚಿಂತೆಯಾಯಿತು. ಇದನ್ನು ಗಾಂಧೀಜಿ ಕೈಗೊಪ್ಪಿಸಲು ನಿರ್ಧರಿಸಿದರು. ಗಾಂಧೀ ಮತ್ತು ಕಸ್ತೂರಾ ಬಾ ಅವರನ್ನು ಕರೆಸಿಕೊಂಡು ಗದ್ಗದಿತರಾದರು. ಅವರ ಹಸ್ತದಲ್ಲಿ ತಮ್ಮ ಸೃಷ್ಟಿಯನ್ನು ಇಟ್ಟರು.

1941ರ ಜುಲೈ 30ರಂದು ಶಸ್ತ್ರ ಚಿಕಿತ್ಸೆ ಮಾಡಲಾಯಿತು, ಆ ಕೊನೆ ಗಳಿಗೆಯಲ್ಲೂ ಕವಿತೆ ಬರೆದರು. 1941ರ ಆಗಸ್ಟ್ 7ರಂದು ಗುರುದೇವ ಮುಚ್ಚಿದ ಕಣ್ಣು ತೆರೆಯಲಿಲ್ಲ. 80 ವರ್ಷಗಳ ಹಿಂದೆ ಹುಟ್ಟಿದ ಜೋರಾಸಾಂಕೋವಿನ ಠಾಕೂರ್ ಮನೆಯಲ್ಲಿ ಈ ವಿಶ್ವ ಮಾನವ ವಿದಾಯ ಹೇಳಿದರು.



ಗೀತಾಂಜಲಿ ಹಾಗೂ ಇತರೆ ಕವಿತೆಗಳ ಇಂಗ್ಲಿಷ್ ಅನುವಾದ ಸುಗಮವಾಗಿ ಸಾಗಿತು. ಈ ರೀತಿ ಗೀತಾಂಜಲಿ ಮತ್ತೆ ಜನ್ಮ ತಳೆಯಿತು, ಇಂಗ್ಲೀಷ್‌ನಲ್ಲಿ. ಗೀತಾಂಜಲಿಯಲ್ಲಿ ಕವಿತೆಗಳ ಜೋಡಣೆಯನ್ನು ವಿಶಿಷ್ಟ ರೀತಿಯಲ್ಲಿ ಮಾಡಿದರು. ಬಂಗಾಲದಲ್ಲಿ ಹುಟ್ಟಿದ ಗೀತಾಂಜಲಿ ವಿಶ್ವದಲ್ಲೆಲ್ಲ ಪಸರಿಸಿತು. ಗೀತಾಂಜಲಿಗೆ ನೊಬೆಲ್ ಪ್ರಶಸ್ತಿ ಪ್ರಕಟವಾಗಿದ್ದು 1913ರ ನವೆಂಬರ್ 13ರಂದು. ಆಗ ರವೀಂದ್ರರು ಶಾಂತಿನಿಕೇತನದಲ್ಲಿದ್ದರು. ಇಡೀ ಭಾರತದಲ್ಲಿ ಸಂಭ್ರಮದ ವಾತಾವರಣ. ವಿಶ್ವ ಸಾಹಿತ್ಯದ ನಕ್ಷೆಯಲ್ಲಿ ಭಾರತ ಛಾಪು ಒತ್ತಿದ್ದ ರವೀಂದ್ರರಿಗೆ ಸಂತಸ ತಂದಿತು.



**ದೇಶ ವಿದೇಶಗಳಲ್ಲಿ ಗಾಂಧೀಜಿ ಕುರಿತು ನಡೆದ ಕಾರ್ಯಕ್ರಮಗಳ ಸಂಕ್ಷಿಪ್ತ ನೋಟ.**

## ನಿಸ್ವಾರ್ಥ ಸೇವೆ ಸಲ್ಲಿಸಿ

**ನೆ**ಲಮಂಗಲ ತಾಲೂಕಿನ ಕರೆಕಲ್‌ಕ್ರಾಸ್‌ನ ದಿವ್ಯಜ್ಯೋತಿ ವಿದ್ಯಾಕೇಂದ್ರದಲ್ಲಿ ವೃದ್ಧಾಶ್ರಮ ಮತ್ತು ಬುದ್ಧಿಮಾಂದ್ಯ ಮಕ್ಕಳ ಕಟ್ಟಡದ ಶಂಕುಸ್ಥಾಪನೆ ಸಮಾರಂಭದಲ್ಲಿ ಗಾಂಧಿ ಸ್ಮಾರಕ ನಿಧಿಯ ಕಾರ್ಯದರ್ಶಿ ಪ್ರೊ. ಜಿ.ಬಿ. ಶಿವರಾಜುರವರು ಮಾತನಾಡುತ್ತಾ ಸಮಾಜ ಸೇವೆ ವೃತ್ತಿಯಾಗದೆ ಹವ್ಯಾಸವಾಗಬೇಕು, ಬದುಕು ಸಾರ್ಥಕವಾಗಲು ನಿಸ್ವಾರ್ಥಸೇವೆ ಸಲ್ಲಿಸಬೇಕೆಂದು ಸಲಹೆ ನೀಡಿದರು. ಹಿರಿಯ ಕಲಾವಿದ ಡಾ॥ ಸಿ. ಚಂದ್ರಶೇಖರ್, ಬ್ರಾಡ್‌ಕಾಸ್ಟ್ ಕನ್ಸಲ್‌ಟೆಂಟ್ ಸಂಸ್ಥೆಯ ಪ್ರಧಾನ ವ್ಯವಸ್ಥಾಪಕ ನರಸಿಂಹಸ್ವಾಮಿ, ಜಿಲ್ಲಾ ಪಂಚಾಯ್ತಿ ಸದಸ್ಯ ಬಿ.ಎಂ.ಎಲ್. ಕಾಂತರಾಜು, ಎಂ.ಎಸ್. ರಾಮಯ್ಯ ವೈದ್ಯಕೀಯ ಕಾಲೇಜಿನ ಪ್ರಾಧ್ಯಾಪಕ ಡಾ॥ ಸೋಮಶೇಖರ್, ಸಂಸ್ಥೆಯ ಅಧ್ಯಕ್ಷ ಕೃಷ್ಣಮೂರ್ತಿ, ತಾಲ್ಲೂಕು ಪಂಚಾಯ್ತಿ ಮಾಜಿ ಅಧ್ಯಕ್ಷ ಲಕ್ಷ್ಮೀನಾರಾಯಣ್ ಉಪಸ್ಥಿತರಿದ್ದರು.

## ರಾಷ್ಟ್ರಧ್ವಜ ತಯಾರಿಕಾ ಘಟಕಕ್ಕೆ ಅನುದಾನ



**ಭಾ**ರತದಲ್ಲಿ ರಾಷ್ಟ್ರಧ್ವಜವನ್ನು ತಯಾರಿಸುವ ಏಕೈಕ ಘಟಕ ಕರ್ನಾಟಕ ಬೆಂಗೇರಿ ಗ್ರಾಮದಲ್ಲಿ ಮಾತ್ರ ಇದ್ದು, ಇದರ ನವೀಕರಣಕ್ಕಾಗಿ 2 ಕೋಟಿ ಹಾಗೂ ಇನ್ನೂ 5 ರಾಷ್ಟ್ರಧ್ವಜ ತಯಾರಿಕಾ ಘಟಕಗಳನ್ನು ಹೊಸದಾಗಿ ತೆರೆಯಲು 5 ಕೋಟಿ ರೂಗಳ ಅನುದಾನವನ್ನು ಮೀಸಲಿಡಲು ಹಾಗೂ ಖಾದಿ ಕ್ಷೇತ್ರದ ಅಭಿವೃದ್ಧಿಗಾಗಿ 129 ಕೋಟಿ ಅನುದಾನವನ್ನು ನೀಡುವಂತೆ ಕರ್ನಾಟಕ ರಾಜ್ಯ ಖಾದಿಗ್ರಾಮೋದ್ಯೋಗ ಸಂಯುಕ್ತ ಸಂಸ್ಥೆಗಳ ಸಭೆಯಲ್ಲಿ ನಾಡೋಜ ಡಾ॥ ಪಾಟೀಲ ಪುಟ್ಟಪ್ಪನವರು ಸರ್ಕಾರವನ್ನು ಒತ್ತಾಯಿಸಿದರು. ಗಾಂಧಿ ಭವನದ ಅಧ್ಯಕ್ಷರಾದ ಡಾ॥ ಹೊ.ಶ್ರೀನಿವಾಸಯ್ಯನವರು ಸ್ವತಂತ್ರ ಪೂರ್ವದಿಂದಲೂ ಖಾದಿ ತನ್ನದೇ ಆದ ಸ್ಥಾನವನ್ನು ಹೊಂದಿದ್ದು, ದೇಶ ಮತ್ತು ಅಂತಾರಾಷ್ಟ್ರೀಯ ಮಟ್ಟದಲ್ಲಿ ಶಾಂತಿಯ ಸಂಕೇತವಾಗಿದ್ದು, ಖಾದಿಯನ್ನು ರಾಷ್ಟ್ರೀಯ ವಸ್ತುವನ್ನಾಗಿ ಘೋಷಿಸಬೇಕೆಂದು ಮನವಿ ಮಾಡಿದರು. ಸಂಘದ ಸದಸ್ಯರಾದ ಎಚ್. ಹನುಮಂತಪ್ಪನವರು ಮಾತನಾಡುತ್ತಾ, 30 ಸಾವಿರಕ್ಕೂ ಅಧಿಕ ಖಾದಿ ಗ್ರಾಮೋದ್ಯೋಗ ಕೇಂದ್ರಗಳು ಸುಮಾರು 6 ಲಕ್ಷ ಮಂದಿಗೆ ಉದ್ಯೋಗ ನೀಡಿದ್ದು, ಈಗ 9550 ಕೇಂದ್ರ ಮಾತ್ರ ಕಾರ್ಯ ನಿರ್ವಹಿಸುತ್ತಿವೆ. ಎಂದರು. ಸದಸ್ಯರಾದ ಡಿ.ಆರ್. ಪಾಟೀಲ ಹಾಗೂ ಉಮೇಶ್ ಬಳಿಗಾರ್‌ರವರು ಉಪಸ್ಥಿತರಿದ್ದರು.

## ಬರಾಕ್ ಒಬಾಮ ಹೀರೋ ನೆಲ್ಸನ್ ಮಂಡೇಲಾ

**ಅ**ಮೆರಿಕ ಅಧ್ಯಕ್ಷ ಬರಾಕ್ ಒಬಾಮ ತಮ್ಮ ಕುಟುಂಬ ಸಮೇತ ಮಾನವ ಹಕ್ಕುಗಳ ಹೋರಾಟಗಾರ ನೆಲ್ಸನ್ ಮಂಡೇಲಾ ಬಂಧಿತರಾಗಿದ್ದ ರೊಬ್ಬನ್ ಐಲ್ಯಾಂಡ್ಸ್ ಜೈಲಿಗೆ ಭೇಟಿನೀಡಿದ್ದರು. ಅಮೆರಿಕ ಮಾನವ ಹಕ್ಕುಗಳ ಹೋರಾಟಗಾರ ಮಾರ್ಟಿನ್ ಲೂಥರ್ ಕಿಂ-ಗ್‌ಗೆ ಸ್ಫೂರ್ತಿನೀಡಿದ್ದು ಮಹಾತ್ಮ ಗಾಂಧೀಜಿಯವರ ಸತ್ಯಾಗ್ರಹ ಮತ್ತು ಅಹಿಂಸಾತ್ಮಕ ಚಳವಳಿಗಳು. ಅದು ಪ್ರಾರಂಭವಾಗಿದ್ದು ದ.ಆಫ್ರಿಕಾಲ್ಲೇ ಹಾಗೂ ತಮ್ಮ ಹೀರೋ ನೆಲ್ಸನ್ ಮಂಡೇಲಾ ಎಂದು ಸ್ಮರಿಸಿಕೊಂಡರು.

## ವಿಶ್ವಸಂಸ್ಥೆಯಲ್ಲಿ ಮಲಾಲ ದಿನಾಚರಣೆ



**ವಿ**ಶ್ವಸಂಸ್ಥೆ ಆಚರಿಸಿದ 'ಮಲಾಲದಿನ' ದಂದು ಇಬ್ಬರು ಭಾರತಿಯರೂ ಸೇರಿದಂತೆ 7 ಮಂದಿ ಯುವತಿಯರಿಗೆ ಶಿಕ್ಷಣಕ್ಕಾಗಿ ಯುವಶೌರ್ಯ ಪ್ರಶಸ್ತಿಯನ್ನು ನೀಡುವ ಸಂದರ್ಭದಲ್ಲಿ ಮಲಾಲ ಮಹಾತ್ಮ ಗಾಂಧಿ, ಬದಶಾ ಖಾನ್, ಮದರ್ ತೆರೆಸಾರವರ ಅಹಿಂಸಾ ತತ್ವವೇ ಆದರ್ಶವೆಂದು ತಿಳಿಸಿದರು.

# ಸ್ವಾವಲಂಬನೆಯತ್ತ...

ಕಾಂತೇಶ ಕದರಮಂಡಲಗಿ

**ಮ**ಹಾತ್ಮ ಗಾಂಧೀಜಿಯವರಿಗೆ ಅಹಿಂಸಾತ್ಮಕ ಸ್ವಾತಂತ್ರ್ಯ ಹೋರಾಟದ ಹಾದಿಯಲ್ಲಿ ತೀವ್ರವಾಗಿ ಕಾಡಿದ್ದು ಭಾರತೀಯರ ಕಡು ಬಡತನ, ನಿರುದ್ಯೋಗ, ಜನತೆಯಲ್ಲಿ ಆಳವಾಗಿ ಬೇರೂರಿದ್ದ ಅಜ್ಞಾನ, ಮೂಢನಂಬಿಕೆಗಳು ಮತ್ತು ಅದಕ್ಕೆ ಕಾರಣವಾದ ಅನಕ್ಷರತೆ ಮತ್ತು ಕಲಿತವರಲ್ಲಿ ಅಡಗಿದ್ದ ವಿದೇಶೀ ವ್ಯಾಮೋಹ. ಹಾಗೂ ಸಾಮಾನ್ಯರ ಬಗ್ಗೆ ವಿದ್ಯಾವಂತರಲ್ಲಿ ಮನೆಮಾಡಿದ್ದ ಅಸಡ್ಡೆ. ಇದೂ ಸಾಲದೆಂಬಂತೆ ನಮ್ಮ ಜಾತೀ ವ್ಯವಸ್ಥೆ, ಗಾಢವಾಗಿ ಬೇರೂರಿರುವ ಪ್ರಾಂತೀಯತೆಯಂತಹ ಬೃಹತ್ ಸವಾಲುಗಳ ಮಧ್ಯೆ ಸ್ವಾತಂತ್ರ್ಯ ಹೋರಾಟ ರೂಪುಗೊಳ್ಳಬೇಕು!ಈ ಅನಿಷ್ಟಗಳ ನಡುವೆಯೇ ಅವರು ಹೋರಾಟಗಾರರನ್ನು , ಹೋರಾಟಗಳನ್ನು ರೂಪಿಸಿದರು ಎನ್ನುವುದೇ ಪವಾಡ. ಇದಕ್ಕೆಲ್ಲ ಗಾಂಧೀಜಿ ಕಂಡುಕೊಂಡ ಮಾರ್ಗೋಪಾಯ ಮೂಲ ಶಿಕ್ಷಣ.

'ಸಾ ವಿದ್ಯಾಯಾ ವಿಮುಕ್ತಯೇ' ಎಂದ-ರೆ ಮುಕ್ತಗೊಳಿಸುವುದೇ ವಿದ್ಯೆ. ಅರ್ಥ, ಆಧ್ಯಾತ್ಮಿಕವಾಗಿ ಅರ್ಥೈಸಬಹುದಾದ ಮರಣಾ ನಂತರದ ಮೋಕ್ಷವೆಂದರೂ ಅದಷ್ಟೇ ಅಲ್ಲ. ಮುಕ್ತಿ ಎಂದರೆ ಬಾಹ್ಯ ಆಕ್ರಮಣಕ್ಕೆ ಒಳಗಾಗಿರುವ ದೇಶವಾಸಿಗಳ ದಾಸ್ಯದ ಮುಕ್ತಿಯೂ ಕೂಡ. ಹಾಗೆಯೇ ಮನುಷ್ಯ ತನ್ನ ಅಗತ್ಯ ಮೀರಿ ಬೇಕುಗಳ ದೈಹಿಕವಾದ ಕೃತಕ ಆಕರ್ಷಣೆಯ ದಾಸ್ಯದಿಂದ ಪಡೆಯಬಹುದಾದ ಬಿಡುಗಡೆಯೂ ಹೌದು. ಹಾಗಾಗಿ ವಿದ್ಯೆ, ಶಿಕ್ಷಣ ಈ ದೇಶವಾಸಿಗಳಿಗೆ ನಿದ್ರಾಹಾರಗಳಷ್ಟೇ ಮುಖ್ಯವೆಂದರಿತು ಶಿಕ್ಷಣದ ಬಗ್ಗೆ ಒತ್ತು ಕೊಡಲು ಶಿಕ್ಷಣಕ್ಕೊಂದು ಯೋಜನೆ ರೂಪಿಸಿ ತನ್ನ ಅನುಯಾಯಿಗಳಿಗೆ ಕರೆಯಿತ್ತರು. ಅಂತಹ ಯೋಜನೆಗಳು ಈ ರೀತಿ.

ಕೇವಲ ಅಕ್ಷರ ಜ್ಞಾನವು ಶಿಕ್ಷಣವಲ್ಲ. ಕೈಕೆಲಸವು ಶಿಕ್ಷಣದ ಮಾಧ್ಯಮ.

ದುಡಿಮೆಯಿಂದ ಒದಗಿಬರುವ ಶಿಕ್ಷಣವನ್ನು ಜೀವನ ಎಂಬ ಗ್ರಂಥದಿಂದಲೇ ಕಲಿಯಬೇಕು. ಅದಕ್ಕೆ ವೆಚ್ಚವೂ ಇಲ್ಲ ಮತ್ತು ಅದನ್ನು ಪ್ರಪಂಚದ ಯಾವ ಶಕ್ತಿಯೂ ಕಿತ್ತುಕೊಳ್ಳಲು ಆಗುವುದಿಲ್ಲ.

ಕುಶಲ ಕೈಕೆಲಸ, ಕಲೆ, ಆರೋಗ್ಯ ಮತ್ತು ಶಿಕ್ಷಣ ಎಲ್ಲವನ್ನೂ ಒಂದು ಯೋಜನೆಯಲ್ಲಿ ಮೂಲ ಶಿಕ್ಷಣದ ಉದ್ದೇಶ ಮನಸ್ಸು, ದೇಹ ಹಾಗು ಆತ್ಮ ವಿಕಾಸಕ್ಕೆ ದಾರಿಯಾಗಬೇಕು. ಮೇಳೈಸಬೇಕು.



ಕಲಿಕೆ ಕ್ರಿಯೆಯಲ್ಲಿಯೇ ಉತ್ಪಾದನೆ ಜೀವನವನ್ನು ಸಮೃದ್ಧಿಗೊಳಿಸುತ್ತದೆ. ರಾಷ್ಟ್ರಕ್ಕೆ ಕೆಲಸ ಹುಡುಕುವ ಕಷ್ಟ ತಪ್ಪಿಸುತ್ತದೆ. ಕಸುಬಿನ ಮೂಲಕ ಶಿಕ್ಷಣ ಜೀವನದಲ್ಲಿ ಸತ್ಯ ಮತ್ತು ಪ್ರೇಮಗಳನ್ನು ನೆಲೆಗೊಳಿಸಲು ಮತ್ತು ಜೀವನದಲ್ಲಿ ಅದು ಹಾಸುಹೊಕ್ಕಾಗಿ ಬೆರೆಯುವುದು ಎಲ್ಲರಿಗೂ ಸುಲಭಸಾಧ್ಯ ವಾಗುತ್ತದೆ.

ಏಳರಿಂದ ಹದಿನಾಲ್ಕು ವಯಸ್ಸಿನ ಮಕ್ಕಳನ್ನು ಸರಕಾರ ತನ್ನ ವಶಕ್ಕೆ ತಗೆದು-ಕೊಂಡು ಉತ್ಪಾದಕ ಶಿಕ್ಷಣ ನೀಡಿ, ತರಬೇತಿ ಮೂಲಕ ಅವರ ದೇಹ ಮನಸ್ಸುಗಳನ್ನು ತರಬೇತಿಗೊಳಿಸಬೇಕೆಂದು ಪ್ರತಿಪಾದಿಸಿದರು.

ಪ್ರಾಥಮಿಕ ಶಿಕ್ಷಣವನ್ನು ಗ್ರಾಮೋದ್ಯೋಗಗಳಾದ ನೂಲುವುದು, ಹತ್ತಿ ಹಿಂಜುವುದರ ಮೂಲಕ ಕೊಟ್ಟರೆ ಸದ್ದಿಲ್ಲದ ಕ್ರಾಂತಿಯಾಗುತ್ತದೆ.

1940 ರ ದಶಕದ ದೇಶದ ಸ್ವಾತಂತ್ರ್ಯ ಹೋರಾಟಗಾರರಲ್ಲಿ, ಗಾಂಧೀಜಿಯವರ ಸ್ವಾವಲಂಬನೆಯ ಶಿಕ್ಷಣ ಕುರಿತ ಈ ಯೋಜನೆಗಳು ಹೊಸ ದಿಕ್ಸೂಚಿಯಾದವು. ದೇಶದ ಎಲ್ಲ ಕಡೆ ಶಿಕ್ಷಣದ ಹೊಸ ಆಂದೋಲನವೇ ಆರಂಭವಾಯಿತು. ಗಾಂಧಿ ಅನುಯಾಯಿಗಳು, ಜನನಾಯಕರು ಸ್ವಾತಂತ್ರ್ಯ ಹೋರಾಟದ ಜೊತೆಗೆ ಶೈಕ್ಷಣಿಕ ಆಂದೋಲನಕ್ಕೆ ಮುಂದಾದರು. ಬಯಲು ಸೀಮೆಯ ಧಾರವಾಡ ಹಾಗು ಸಹ್ಯಾದ್ರಿ ತಪ್ಪಲಿನ ಶಿವಮೊಗ್ಗದಲ್ಲಿ ಈ ತೆರನ ಶೈಕ್ಷಣಿಕ ಕ್ರಾಂತಿ ಪ್ರಾರಂಭಗೊಂಡವು. ಕೈಕೆಲಸದಿಂದ ಶಿಕ್ಷಣದ ಎಳೆಯನ್ನು ಹಿಡಿದು ಧಾರವಾಡದಲ್ಲಿ ಟೇಲರಿಂಗ್ ಕಾಲೇಜೊಂದು ಆರಂಭಗೊಂಡಾಗ ಶಿವಮೊಗ್ಗದ ಎಸ್.ಆ ಆರ್. ನಾಗಪ್ಪ ಶ್ರೇಷ್ಠಿಗಳು ಧಾರವಾಡದಲ್ಲಿ ಟೇಲರಿಂಗ್ ಅಭ್ಯಾಸ ಮಾಡುತ್ತಾರೆ. ಶಿವಮೊಗ್ಗ ಗಾಂಧಿಬಜಾರಿನಲ್ಲಿ ಒಂದು ಖಾದಿ ಭಂಡಾರ ಹಾಗು ಟೇಲರಿಂಗ್ ಅಂಗಡಿಯನ್ನೂ ತೆರೆಯುತ್ತಾರೆ. ತನ್ನ ಸ್ವ ಅನುಭವದ ಬಲದಿಂದ ಉದ್ಯೋಗದೊಂದಿಗೆ ಕಲಿಕೆಯ ಗಾಂಧೀಜಿಯವರ ಯೋಜನೆಗಳಿಗೆ ಚಾಲನೆಯನ್ನು ಕೊಡುತ್ತಾರೆ.

ಶಿವಮೊಗ್ಗದಲ್ಲಿ ಹಿರಿಯರಾದ ಎಚ್.ಎಸ್. ರುದ್ರಪ್ಪ, ಎಸ್ ವಿ ಕೃಷ್ಣಮೂರ್ತಿ ರಾವ್ (ಉಪ ಸಭಾಪತಿಗಳು ಲೋಕಸಭೆ), ಪಿ ಮುರುಡಪ್ಪ., ಆರ್ ಕೆ ಜಯತೀರ್ಥಾಚಾರ್, ಎಸ್ ನರಸಿಂಹಮೂರ್ತಿ, ಹಸೂಡಿ ವೆಂಕಟಶಾಸ್ತ್ರಿ, ಎಚ್ ಲಿಂಗಪ್ಪ, ಕಡಿದಾಳ್ ಮಂಜಪ್ಪ, ಎಂ ನರಸಿಂಹ ಕಾಮತ್, ಡಾ.ದತ್ತಾತ್ರಿ ಕೆ ಎನ್, ಡಿ ಎಸ್ ದಿನಕರ್, ಎಚ್ ಸಿದ್ದಯ್ಯ, ಜಿ ಶ್ರೀನಿವಾಸ ಅಯ್ಯಂಗಾರ್ ಮುಂತಾದ ಹಿರಿಯರೂ ಗಾಂಧೀಜಿಯವರ ಶಿಕ್ಷಣ ಅಭಿವೃದ್ಧಿಯ ಕರೆಗೆ ಓಗೊಟ್ಟು ಗಾಂಧಿತತ್ವಗಳ ಅಡಿಯಲ್ಲಿ ಸಮಿತಿಯೊಂದನ್ನು ರೂಪಿಸುತ್ತಾರೆ. 13.03.1946 ರಂದು ರೂಪುಗೊಂಡ "ರಾಷ್ಟ್ರೀಯ ಶಿಕ್ಷಣ ಸಮಿತಿಯು" ಪ್ರೌಢಶಾಲೆಯೊಂದನ್ನು ಪ್ರಾರಂಭಿಸುತ್ತದೆ.ಆ ಶಾಲೆ ಕರ್ನಾಟಕ ಸಂಘದಲ್ಲಿ ತನ್ನ ಮೊದಲ ಹೆಜ್ಜೆಯಿಡುತ್ತದೆ.

ಸಂಸ್ಥೆಯ ಆಶ್ರಯದಲ್ಲಿ ಅನೇಕ ಸಮಾಜಮುಖಿ ಯೋಜನೆಗಳನ್ನು ಕಾರ್ಯಗತಗೊಳಿಸಲಾಗಿತ್ತು. ಕಾಗದ, ಬೆಂಕಿಪೊಟ್ಟಣ, ಸೂರ್ಯಕಾಂತಿ ಸಾಬೂನು ಇತ್ಯಾದಿ ನಿತ್ಯೋಪಯೋಗಿ ಸ್ವದೇಶಿ ವಸ್ತುಗಳನ್ನು ತಯಾರಿಸಿ ಜನಗಳಿಗೆ ಒದಗಿಸಿದ್ದರು.

ಅಂದಿನಿಂದ ಇಂದಿನವರೆಗೆ ಈ ಸಂಸ್ಥೆ ನಡೆದು ಬಂದಿರುವ ದಾರಿ ಅಮೋಘವಾದುದು. ಈಗ ಪದವಿ ವಿದ್ಯಾಲಯ, ಕಾನೂನು ಮತ್ತು ಫಾರ್ಮಸಿ ಕಾಲೇಜು ಇತ್ಯಾದಿ ಶಿಕ್ಷಣಗಳನ್ನು ನೀಡುವ ಮೂಲಕ ವಿದ್ಯಾರ್ಥಿಗಳ ಜ್ಞಾನಾರ್ಜನೆಗೆ ಸಹಾಯಕವಾಗಿ ಕಾರ್ಯನಿರ್ವಹಿಸುತ್ತಾ ಶಿಕ್ಷಣಸಂಸ್ಥೆಗಳಿಗೆ ಮಾದರಿ ಅಗಿದೆ.

ರಾಷ್ಟ್ರೀಯ ಶಿಕ್ಷಣ ಸಂಸ್ಥೆಗೆ ಡಾ॥ ರಾಜೇಂದ್ರ ಪ್ರಸಾದ್, ಡಾ॥ ರಾಧಾಕೃಷ್ಣನ್, ಲಾಲ್ ಬಹದ್ದೂರ್ ಶಾಸ್ತ್ರಿ, ಜಯಚಾಮರಾಜ ಒಡೆ-ಯರ್ ಮುಂತಾದ ಹಿರಿಯ ನಾಯಕರು ಭೇಟಿ ನೀಡಿದ್ದರು.

❖

ಸ್ಥಾಪನೆ : 1964　　　　　　　　ಫೋ : 23341972, 23442648, 23449450



# ದಿ ಜನತಾ ಕೋ ಆಪರೇಟಿವ್ ಬ್ಯಾಂಕ್ ಲಿ.

## ಮಲ್ಲೇಶ್ವರಂ, ಬೆಂಗಳೂರು – ೫೬೦ ೦೫೫

ಶಾಖೆಗಳು : ಮಲ್ಲೇಶ್ವರಂ, ಪಶ್ಚಿಮ ಕಾರ್ಡ್ ರಸ್ತೆ, ಗೋವಿಂದರಾಜನಗರ, ಅಮರಜ್ಯೋತಿನಗರ.

| ಠೇವಣಿಗಳ ಮೇಲಿನ ಬಡ್ಡಿ ದರ ದಿ.01.05.2013 ರಿಂದ ಜಾರಿಗೆ ಬರುವಂತೆ | | | ಬ್ಯಾಂಕಿನ ಹಣಕಾಸಿನ ಪರಿಸ್ಥಿತಿ ದಿ 31.03.2013ರಲ್ಲಿದ್ದಂತೆ | |
|---|---|---|---|---|
| ವಿವರ | ಸಾಮಾನ್ಯ ವರ್ಗ | ಹಿರಿಯ ನಾಗರಿಕರಿಗೆ | | ರೂ. ಲಕ್ಷಗಳಲ್ಲಿ |
| 30 ದಿನಗಳಿಂದ 90 ದಿನಗಳವರೆಗೆ | 4.50% | 5.00% | ಪಾವತಿಯಾದ ಷೇರು ಬಂಡವಾಳ | 1494 |
| 91 ದಿನಗಳಿಂದ 180 ದಿನಗಳವರೆಗೆ | 7.00% | 7.50% | ನಿಧಿಗಳು | 2541 |
| 181 ದಿನಗಳಿಂದ 1 ವರ್ಷದವರೆಗೆ | 8.50% | 9.00% | ಠೇವಣಿಗಳು | 42080 |
| 1 ವರ್ಷ ಮೇಲ್ಪಟ್ಟು 2 ವರ್ಷಗಳವರೆಗೆ | 9.50% | 10.00% | ಹೂಡಿಕೆಗಳು | 12581 |
| 2 ವರ್ಷಗಳ ಮೇಲ್ಪಟ್ಟು 3 ವರ್ಷಗಳವರೆಗೆ | 10.25% | 10.75% | ಸಾಲ ಮತ್ತು ಮುಂಗಡಗಳು | 32408 |
| 3 ವರ್ಷಗಳ ಮೇಲ್ಪಟ್ಟು | 9.00% | 9.50% | ದುಡಿಯುವ ಬಂಡವಾಳ | 47088 |
| ಉಳಿತಾಯ ಖಾತೆ | 4.00% | 4.00% | ಒಟ್ಟುಲಾಭ | 473.83 |
| | | | ನಿವ್ವಳ ಎನ್.ಪಿ.ಎ | 0% |

## ಜನತಾ ದ್ವಿಗುಣ ಯೋಜನೆ “ಜನತಾ ನಗದು ಪತ್ರ”

1　94 ತಿಂಗಳಿಗೆ ಸಾಮಾನ್ಯ ವರ್ಗದವರಿಗೆ ದ್ವಿಗುಣ

2　90 ತಿಂಗಳಿಗೆ ಹಿರಿಯ ನಾಗರೀಕರಿಗೆ ದ್ವಿಗುಣ

ಬ್ಯಾಂಕು ಚಿನ್ನಾಭರಣಗಳ ಮೇಲೆ ಪ್ರತಿ ಗ್ರಾಂ. ರೂ.2000/- ರಂತೆ ಸಾಲ ನೀಡುತ್ತಲಿದೆ. ಬಡ್ಡಿ ದರ ಶೇ.12 ರಂತೆ

ಬ್ಯಾಂಕಿನ ಎಲ್ಲಾ ಶಾಖೆಗಳು ಗಣಕೀಕೃತಗೊಂಡಿದ್ದು, ಭದ್ರತಾ ಕಪಾಟುಗಳ ಸೌಲಭ್ಯವಿರುತ್ತದೆ.

ರೂ. 1.00 ಲಕ್ಷ ವರೆಗಿನ ಠೇವಣಿಗಳು ಡಿ.ಐ.ಸಿ.ಜಿ.ಸಿ ಮುಂಬಯಿ ಇವರಿಂದ ವಿಮೆ ಮಾಡಿಸಲ್ಪಟ್ಟಿವೆ.

### ಆಡಳಿತ ಮಂಡಳಿ ಸದಸ್ಯರು

| | | | |
|---|---|---|---|
| ಶ್ರೀ ಮರಿಗೌಡ.ಸಿ.ಎಲ್ | ಅಧ್ಯಕ್ಷರು | ಶ್ರೀ ಗೋವಿಂದ.ಎ | ನಿರ್ದೇಶಕರು |
| ಶ್ರೀ ವಿಜಯಕುಮಾರ್.ಸಿ.ಜಿ | ಉಪಾಧ್ಯಕ್ಷರು | ಶ್ರೀ ರಮೇಶ್.ಪಿ.ಎಸ್ | ನಿರ್ದೇಶಕರು |
| ಶ್ರೀ ರುದ್ರೇಗೌಡ | ನಿರ್ದೇಶಕರು | ಶ್ರೀ ವಿಜಯಸಾರಥಿ.ಎಂ.ಎಸ್ | ನಿರ್ದೇಶಕರು |
| ಶ್ರೀ ಜಯರಾಮೇಗೌಡ.ಎಂ | ನಿರ್ದೇಶಕರು | ಶ್ರೀ ಡಾ॥ ಕಾಳಪ್ಪ.ಎ | ನಿರ್ದೇಶಕರು |
| ಶ್ರೀ ಗಂಗಾಧರ್.ಎಲ್ | ನಿರ್ದೇಶಕರು | ಶ್ರೀಮತಿ ಜಯಲಕ್ಷ್ಮಿ.ಸಿ.ಜಿ | ನಿರ್ದೇಶಕರು |
| ಶ್ರೀ ಪುಟ್ಟಸ್ವಾಮಿ.ಕೆ | ನಿರ್ದೇಶಕರು | ಶ್ರೀ ಚಿಕ್ಕಣ್ಣಗೌಡ | ನಿರ್ದೇಶಕರು |
| ಶ್ರೀ ಅರವಿಂದ.ಬಿ | ನಿರ್ದೇಶಕರು | ಶ್ರೀ ಸಿದ್ದರಾಮು | ನಿರ್ದೇಶಕರು |
| ಶ್ರೀ ನರಸಿಂಹಯ್ಯ.ಬಿ.ಎಚ್ | ನಿರ್ದೇಶಕರು | | |

ಪ್ರಧಾನ ವ್ಯವಸ್ಥಾಪಕರು　: ಶ್ರೀ ಕೆ.ಎಸ್. ಮೂರ್ತಿ

# ಅಂಗಳಕ್ಕೆ ಬಂದ ಭಗವಂತ



**ವೇಮಗಲ್ ಸೋಮಶೇಖರ್**

ಗಾಂಧೀಜಿ ಸೇವಾಗ್ರಾಮದ ವಾರ್ಧಾ ಆಶ್ರಮದಲ್ಲಿದ್ದಾಗ ವಾಡಿಕೆಯಂತೆ ಎಂಟು–ಹತ್ತು ಚಿಕ್ಕ ದೊಡ್ಡ ಸಂಗಡಿಗರೊಂದಿಗೆ ಒಂದು ಸಂಜೆ ತಿರುಗಾಡಲಿಕ್ಕೆ ಹೊರಟಿದ್ದರು. ಅಷ್ಟರಲ್ಲಿ ಎದುರಿಗೆ ಅತಿಥಿಯೊಬ್ಬರು ಬಂದರು. ಅವರು ಹರಿದ್ವಾರದಿಂದ ಬಂದಿದ್ದರು. ಕಂಕುಳಲ್ಲೊಂದು ಬಟ್ಟೆಗಂಟಿತ್ತು. ಅದನ್ನು ನೆಲದ ಮೇಲಿಟ್ಟು ಗಾಂಧಿಯವರಿಗೆ ಭಕ್ತಿ ಪೂರ್ವಕವಾಗಿ ವಂದಿಸಿ ದೂರ ಸರಿದು ನಿಂತರು.

ಗಾಂಧೀಜಿ ಪ್ರತಿವಂದನೆ ಮಾಡಿದರು. ಆತ ಕುಷ್ಠರೋಗಿಯಾಗಿದ್ದ. ಗಾಂಧೀಜಿ ಸ್ನೇಹದ ದೃಷ್ಟಿಯಿಂದ ಆತನ ಇಡೀ ಶರೀರವನ್ನು ಅವಲೋಕಿಸಿ ಹೀಗೆಂದರು, ' ನಿಮ್ಮ ಪತ್ರ ತಲುಪಿದೆ, ಆದರೆ ನನ್ನ ಉತ್ತರದ ದಾರಿ ಸಹ ನೋಡದೆ ಹೀಗೆ ಒಮ್ಮಿಂದೊಮ್ಮೆ ಬಂದು ಬಿಡಬಹುದು ಎಂದು ನಾನು ಕಲ್ಪಿಸಿರಲಿಲ್ಲ.' ಆ ಮಾತನ್ನು ಕೇಳಿದ ಕುಷ್ಠರೋಗಿಗೆ ನಾಚಿಕೆಯಾಯಿತು. ಮೋರೆ ಬಾಡಿತು, ಆತ ಹೇಳಿದ ' ಈ ಗಂಟಿನಲ್ಲಿ ನಾನು ಸ್ವತಃ ನೂತು ನೂಲಿದ ಲಾಡಿ ಇದೆ, ಒಂದಿಲ್ಲೊಂದು ದಿನ ಇದನ್ನು ತಮಗೆ ಅರ್ಪಿಸಬೇಕೆಂದು ಬಯಕೆ ಇತ್ತು ಆ ನನ್ನ ಇಚ್ಛೆ ಇಂದು ಪೂರ್ಣವಾಯಿತು, ತಮ್ಮ ದರ್ಶನದಿಂದ ನಾನು ಪಾವನನಾದೆ'.

ಇಷ್ಟು ಹೇಳುತ್ತಲೇ ಆತನ ದೃಷ್ಟಿಯು ಆಶ್ರಮದ ಗುಡಿಸಲುಗಳ ಕಡೆಗೆ ಹೋಯಿತು. ಅವು ಸುಂದರವಾಗಿದ್ದವು. ಆದರೆ ಅವು ಕುಷ್ಠರೋಗಿಯಾದ ನನಗೆ ಹೇಗೆ ದೊರೆತಾವು? ಎಂದು ಅಲ್ಲಿಯೇ ಇದ್ದ ಒಂದು ಮರದ ಕಡೆಗೆ ಬೊಟ್ಟು ಮಾಡಿ ನಿಟ್ಟುಸಿರು ಬಿಡುತ್ತಾ ' ಇಂದು ರಾತ್ರಿ ಮಟ್ಟಿಗೆ ಆ ಮರದ ಬುಡದಲ್ಲಿ ಬಿದ್ದುಕೊಂಡಿದ್ದು ಬೆಳಗಾಗುತ್ತಲೇ ತಿರುಗಿ ಹರಿದ್ವಾರದ ಕಡೆಗೆ ಗಾಡಿ ಹಿಡಿಯುತ್ತೇನೆ' ಎಂದ.

ಅಷ್ಟೊತ್ತಿಗೆ ಗಾಂಧೀಜಿ ತಿರುಗಾಡಲಿಕ್ಕೆ ಹೊರಡುವ ಸಮಯ ಮೀರಿ ಹೋಗಿತ್ತು. ಪ್ರಾರ್ಥನೆಯ ಸಮಯಕ್ಕೆ ಸರಿಯಾಗಿ ಬರಬೇಕಾಗಿದ್ದುದರಿಂದ ಹೆಚ್ಚು ಹೊತ್ತು ಕಳೆಯದೆ ಆತನ ಊಟದ ವ್ಯವಸ್ಥೆಗೆ ಏರ್ಪಾಡು ಮಾಡಿರೆಂದು ಹೇಳಿ ಮುನ್ನಡೆದರು.

ಆ ಕುಷ್ಠರೋಗಿಯನ್ನು ಸಂಪೂರ್ಣ ಆಕರ್ಷಿಸಿ ಬಿಟ್ಟಿದ್ದ ಗಾಂಧಿಯವರ ಚಿತ್ತವು ಚಂಚಲವಾಗಿ 1932ರ ನೆನಪಾಯಿತು. ಆಗ ಯರವಾಡ ಸೆರೆಮನೆಯಲ್ಲಿ ಗಾಂಧಿಯವರ ಜೊತೆಯಲ್ಲಿ ಆತನೂ ಇದ್ದುದನ್ನು ಗಾಂಧೀಜಿ ನೆನಪಿಸಿಕೊಂಡರು. ನಂತರದಲ್ಲಿ ಜೈಲಿನಿಂದ ಆತ ತನ್ನ ಕುಷ್ಠರೋಗದ ಮೇಲೆ ಎಲ್ಲಾ ತರಹದ ಉಪಚಾರ ಮಾಡಿಸಿದ್ದ. ಎಲ್ಲಾ ಆಸ್ಪತ್ರೆಗಳನ್ನೂ ಸುತ್ತಾಡಿದ್ದ. ಇಷ್ಟಾದರೂ ಸ್ವಲ್ಪವೂ ಗುಣ ಕಂಡು ಬರದೆ ಎಲ್ಲಾ ಕಡೆ ತಿರಸ್ಕೃತನಾಗಿ ಕೊನೆಗೆ ಬೇಸತ್ತು ಹರಿದ್ವಾರಕ್ಕೆ ಹೊರಟು ಹೋಗಿದ್ದ. ಅಲ್ಲಿಂದ ಗಾಂಧಿಯವರ ಪ್ರತ್ಯುತ್ತರದ ದಾರಿಕಾಣದೆ ವಾರ್ಧಾ ಆಶ್ರಮಕ್ಕೆ ಹರಿದ್ವಾರದಿಂದ ಓಡಿ ಬಂದಿದ್ದ.

ಪ್ರತಿನಿತ್ಯ ಸಂಜೆ ವಾಯು ವಿಹಾರಕ್ಕೆಂದು ಹೊರಟಾಗ ಆನಂದ ಭರಿತವಾಗಿರುತ್ತಿದ್ದ ಗಾಂಧಿಯವರ ಮುಖ ಮುದ್ರೆ ಪ್ರಫುಲ್ಲಿತವಾಗಿರುತ್ತಿತ್ತು. ಆದರೆ ಅಂದು ಮಾತ್ರ ಅವರ ಮುಖ ಬಾಡಿ ಹೋಗಿತ್ತು. ಮೂಕರಂತೆ ತಿರುಗಿ ಬಂದರು. ಆಶ್ರಮದಲ್ಲಿದ್ದ ಅಸ್ಪೃಶ್ಯರೂ ಸಹ ಮುಟ್ಟಲು ಅಂಜುತ್ತಿರುವಂತ ಕುಷ್ಠರೋಗಿಗೆ ಅಲ್ಲಿ ಪ್ರವೇಶ ಕೊಡುವುದು ಅತ್ಯಂತ ತೊಡಕಿನ ಪ್ರಶ್ನೆಯಾಗಿತ್ತು ಮನಸ್ಸಿಗೆ ಶಾಂತಿ ಇರಲಿಲ್ಲ. 'ಮನೆಗೆ ಬಂದ ಭಾಗೀರಥಿಯನ್ನು ಹಿಂದಕ್ಕಟ್ಟುವಿರಾ? ಕುಷ್ಠರೋಗಿಯ ರೂಪದಲ್ಲಿ ಬಂದವನು ನಾನೇ, ಅಂಗಳದಲ್ಲಿ ಕಾಲಿರಿಸಿದ ಭಗವಂತನನ್ನು ಹಿಂದಕ್ಕೆ ಕಳುಸುವಿರಾ?' ಎಂದು ಹೃದಯದ್ವಾರವನ್ನು ಯಾರೋ ತಟ್ಟಿ ಹೇಳುತ್ತಿರುವಂತೆ ಕನಸು ಬಿತ್ತು. ಗಾಂಧೀಜಿ ಕಣ್ಣು ತೆರೆದರು. ಎದೆಯ ಮೇಲಿನ ಶಿಲಾಕಲ್ಲು ಇಳಿದಂತೆ ಹಗುರವೆನಿಸಿತು.

ಮುಂಜಾನೆಯ ಪ್ರಾರ್ಥನಾ ಸಭೆಯಲ್ಲಿ ಗಾಂಧೀಜಿ ತಮ್ಮ ಹೃದಯವನ್ನು ತೋಡಿ–ಕೊಂಡರು. 'ನಿನ್ನೆ ಸಂಜೆ ನಮ್ಮಲ್ಲೊಬ್ಬ ಅತಿಥಿ ಬಂದಿದ್ದಾನೆ, ಆತನಿಗೆ ಕುಷ್ಠವಾಗಿದೆ, ಅದೊಂದು ಸ್ಪರ್ಶರೋಗ, ದೇವರೇ ಕುಷ್ಠರೋಗಿಯ ರೂಪದಲ್ಲಿ ನನ್ನನ್ನು ಪರೀಕ್ಷೆ ಮಾಡಲು ಬಂದಿರಬಹುದೆಂದು ನನಗೆ ಅನಿಸುತ್ತದೆ. ಆತನಿಗೆ ಆಶ್ರಮದಲ್ಲಿ ಪ್ರವೇಶ ಕೊಡುವುದಿಲ್ಲವೆಂದರೆ ದೇವರಿಗೆ ಪ್ರವೇಶ ಕೊಡುವುದಿಲ್ಲ ಎಂದಂತೆ, ದೇವರ ಹೆಸರಿನಲ್ಲಿ ನಿಮ್ಮೆಲ್ಲರ ಕ್ಷೇಮ ಸಮಾಚಾರದ ಜವಾಬ್ದಾರಿಯನ್ನು ನಾನು ವಹಿಸಿದ್ದಿರುತ್ತದೆ. ಆದ ಕಾರಣ ನಿಮ್ಮ ಸಮ್ಮತಿ ಸಿಗದ ಹೊರತು ಆತನನ್ನು ಇಲ್ಲಿ ಇರಿಸಿಕೊಳ್ಳುವ ಸಾಹಸಕ್ಕೆ ನಾನು ಕೈ ಹಾಕಲಾರೆ.'

'ಅತಿಥಿಯು ಆಶ್ರಮದಲ್ಲಿಯೇ ಇರಲಿ' ಎಂದು ಇಡೀ ಪ್ರಾರ್ಥನಾ ಸಭೆಯವರ ಕಂಠ ಒಡನುಡಿಯಿತು. ಆ ಅತಿಥಿಯು ಸಂಸ್ಕೃತ ವಿದ್ವಾಂಸರಾಗಿದ್ದ ಪರಚುರೆ ಶಾಸ್ತ್ರಿಗಳು. ವಾರ್ಧಾ ಆಶ್ರಮದಲ್ಲಿ ಶಾಸ್ತ್ರಿಯವರಿಗಾಗಿ ಪ್ರತ್ಯೇಕ ಗುಡಿಸಲನ್ನು ನಿರ್ಮಿಸಲಾಯಿತು. ಗಾಂಧಿಯವರ ಕುಟೀರ ಹತ್ತಿರದಲ್ಲೇ ಇದ್ದ ಆ ಗುಡಿಸಲಿನಲ್ಲಿ ಗಾಂಧೀಜಿ ಸ್ವತಃ ಶಾಸ್ತ್ರಿಗಳಿಗೆ ಪ್ರತಿದಿನ ಶುಶ್ರೂಷೆ ಮಾಡುತ್ತಿದ್ದರು. ಮೈಮಾಲೀಷ್ ಮಾಡುತ್ತಿದ್ದರು. ಗಾಂಧೀಜಿ ಶಾಸ್ತ್ರಿಗಳಿಗೆ 'ಸಾಯುವುದಕ್ಕೆ ಅನುಮತಿ ಇಲ್ಲಾ' ಎಂದು ಹೇಳಿದ್ದರು. ಕ್ರಮೇಣ ಚೇತರಿಸಿಕೊಂಡ ಪರಚುರೆಶಾಸ್ತ್ರಿ 1945ರ ಜುಲೈನಲ್ಲಿ ವಾರ್ಧಾ ಆಶ್ರಮದಲ್ಲಿ ಅದೇ ಗುಡಿಸಲಿನಲ್ಲಿಯೇ ಕೊನೆಯುಸಿರೆಳೆದರು. ಆ ಸಮಯದಲ್ಲಿ ಗಾಂಧೀಜಿ ವೈಸ್‌ರಾಯ್ ಅವರನ್ನು ಭೇಟಿ ಮಾಡಲು ಸಿಮ್ಲಾದಲ್ಲಿದ್ದರು. ಶಾಸ್ತ್ರಿಗಳ ನಿಧನ ಸುದ್ದಿ ತಿಳಿದ ಗಾಂಧೀಜಿ ಎರವಾಡ ಸೆರೆಮನೆಯಲ್ಲಿ (1932) ಸತ್ಯಾಗ್ರಹ ನಿಲ್ಲಿಸಿದಾಗ ಅಲ್ಲೇ ಶಿಕ್ಷೆ ಅನುಭವಿಸುತ್ತಿದ್ದ ಪರಚರೆ ಶಾಸ್ತ್ರಿಗಳನ್ನು ಸ್ಮರಿಸಿದರು.



ಸ್ಫೂರ್ತಿ

# ಮಾನವ ಸೇತುವೆ



ವಿ. ಸೋಮಸುಂದರಿ

**ಭಾ**ರತೀಯ ಸೈನಿಕರು ಎಲ್ಲಾ ಸಂದರ್ಭಗಳಲ್ಲಿ ಅತ್ಯುತ್ತಮ ಶೌರ್ಯ ಪರಾಕ್ರಮ ಮತ್ತು ಮಾನವೀಯತೆಗೆ ಹೆಸರುವಾಸಿ. ಇದನ್ನು ಚೀನಾ, ಪಾಕಿಸ್ತಾನ, ಬಂಗ್ಲಾ ದೇಶದ ಮತ್ತು ಶ್ರೀಲಂಕಾ ಯುದ್ಧಗಳ ಸಮಯದಲ್ಲಿ ನಾವೆಲ್ಲಾ ಕಂಡಿದ್ದೇವೆ ಹಾಗೂ ಈಗ ಕಳೆದ ತಿಂಗಳಿನಿಂದ ನಡೆಯುತ್ತಿರುವ ಉತ್ತರಾಖಂಡ್, ಕೇದಾರನಾಥ್, ಬದರಿ, ಗೌರಿಕುಂಡ್, ಹೇಮಕುಂಡ್, ರುದ್ರಪ್ರಯಾಗ್ ಮತ್ತು ಮುರಿಗಳಲ್ಲಿ ಉಂಟಾದ ಭೀಕರ ಪ್ರವಾಹದ ಹಾವಳಿಯ ದುರ್ಘಟನೆಗಳ ಸಮಯದಲ್ಲಿ ಜನರನ್ನು ರಕ್ಷಣೆ ಮಾಡುವ ಸಂದರ್ಭದಲ್ಲಿ, ಪುನಃ ಮಾನವೀಯತೆ ಮೆರೆದಿದ್ದಾರೆ. ಈ ದುರ್ಘಟನೆಯಲ್ಲಿ ಸುಮಾರು 71,400 ಜನ ನಿರಾಶ್ರಿತರಾಗಿ ತೊಂದರೆಗೊಳಗಾಗಿದ್ದಾರೆ. ಇಲ್ಲಿಯವರೆಗೆ ಸುಮಾರು 1000ಕ್ಕಿಂತಲೂ ಅಧಿಕ ಜನ ಸತ್ತಿರುವುದಾಗಿ ತಿಳಿದಿದ್ದು, 22,000 ಯಾತ್ರಿಕರನ್ನು ಅಪಾಯದಿಂದ ಪಾರುಮಾಡಲಾಗಿದೆ. ಅದರಲ್ಲಿ ಕರ್ನಾಟಕದ 174 ಜನರೂ ಇದ್ದಾರೆ. ಇಂತಹ ಸಂದರ್ಭಗಳಲ್ಲಿ ನಮ್ಮ ಸೈನಿಕರು ಜೀವದ ಹಂಗು ತೊರೆದು ಜನರನ್ನು ಅಪಾಯದಿಂದ ಪಾರುಮಾಡಿದ್ದು ಶ್ಲಾಘನೀಯ. ಘಟನೆ ನಡೆದು ತಿಂಗಳೇ ಕಳೆದಿದ್ದರೂ ಇನ್ನೂ 5748 ಯಾತ್ರಿಕರು ಕಾಣೆ–ಯಾಗಿದ್ದು, ದುರ್ಗಮ ಗುಡ್ಡಗಾಡು ಪ್ರದೇಶದಲ್ಲಿ ಎಡೆಬಿಡದ ಮಳೆ, ಪ್ರವಾಹಗಳ ನಡುವೆ ರಕ್ಷಣಾಕಾರ್ಯ ದುಸ್ತರ. ಆದರೂ ಭಾರತೀಯ ಸೈನ್ಯ ಧೃತಿಗೆಡದೆ ಹೆಲಿಕಾಪ್ಟರ್, ದೋಣಿಗಳು, ಡೋಲಿ, ಹೆಗಲಿನ ಮೇಲೆ ಹೊತ್ತು, ಹಗ್ಗದ ಸೇತುವೆ ಹೀಗೆ ಎಲ್ಲ ರೀತಿಯ ಪ್ರಯತ್ನಗಳು ನಿರಂತರವಾಗಿ ನಡೆದಿದೆ. ಆಗಾಗ್ಗೆ ಮಾನವೀಯ ಘಟನೆಗಳನ್ನು ಈ ಸಂದರ್ಭಗಳಲ್ಲಿ ಕಾಣಬಹುದಾಗಿದೆ.

ಉತ್ತರಾಖಂಡದಲ್ಲಿ ಯಾತ್ರಿಕರು ಮತ್ತು ಸ್ಥಳೀಯರು ನಿರಾಶರಾಗಿದ್ದರು, ಸುತ್ತಲೂ ಜಲಪ್ರವಾಹ, ಭಾರತೀಯ ಸೈನಿಕರು ಕಷ್ಟ ಪಟ್ಟು ಕಟ್ಟಿದ ಹಗ್ಗದ ಸೇತುವೆ ಮೇಲೆ ಒಂದು ದಡದಿಂದ ಮತ್ತೊಂದು ದಡಕ್ಕೆ ದಾಟಬೇಕು. ವಯಸ್ಸಾದವರು, ಮಕ್ಕಳೂ, ಹೆಂಗಸರೂ ಹಗ್ಗದ ಸೇತುವೆ ಮೇಲೆ ದಾಟಲು ಅಶಕ್ತರಾಗಿದ್ದರು. ಆದರೆ ಅದಕ್ಕೆ ಪರ್ಯಾಯ ವ್ಯವಸ್ಥೆ ಮಾಡುವುದಕ್ಕೆ ಸಮಯವಿರಲಿಲ್ಲ. ಆಗ ಸೈನಿಕರು ತೋರಿದ ಸಮಯ ಪ್ರಜ್ಞೆ ನಿಜಕ್ಕೂ ಆಶ್ಚರ್ಯಕರ! ಎಲ್ಲರೂ ಹತಾಶರಾಗಿದ್ದಾಗ ಸೈನಿಕರು ಸಾಲಾಗಿ ಹಗ್ಗದ ಸೇತುವೆ ಮೇಲೆ ಅಡ್ಡಲಾಗಿ ಬೋರಲಾಗಿ ಮಲಗಿದರು. ಯಾತ್ರಿಕರಿಗೆ ಒಬ್ಬೊಬ್ಬರಾಗಿ ಮಾನವ ದೇಹಗಳ ಸೇತುವೆ ಮೇಲೆ ಅಂಬೆಗಾಲಿನಿಂದ ತೆವಳಿಕೊಂಡು ಅಥವಾ ನಡೆದುಕೊಂಡು ಹೋಗಿ ದಾಟುವಂತೆ ಹೇಳಿದರು. ವಯಸ್ಸಾದ ಹಿರಿಯ ಯಾತ್ರಿಕರು ಎಲ್ಲರೂ ದಾಟಿ–ದ ನಂತರವೇ ಆ ಸೈನಿಕರು ವಿರಮಿಸಿದ್ದು. ಸೈನಿಕರು ಸಾರ್ಥಕತೆಯಿಂದ ನಗುತ್ತಿದ್ದರೆ, ಯಾತ್ರಿಕರು ಸಂತಸ ಮತ್ತು ಕೃತಜ್ಞತೆಯಿಂದ ಮೂಕವಿಸ್ಮಿತರಾಗಿದ್ದರು.

ಅದೇ ರೀತಿ ಕಡಿದಾದ ಬೆಟ್ಟ ಪ್ರದೇಶದಲ್ಲಿ ಸಿಕ್ಕಿಬಿದ್ದ ವೃದ್ಧೆಯೊಬ್ಬರು ಬೆಟ್ಟ ಇಳಿಜಾರಿನಲ್ಲಿ ಇಳಿದು ದಾಟಿ ಬರುವುದು ಸಾಧ್ಯವೇ ಇಲ್ಲವೆಂಬ ಭಾವನೆ. ಅಲ್ಲೇ ಇದ್ದರೆ ಬದುಕಿ ಉಳಿಯುವ ಸಂಭವವಿಲ್ಲ. ಏನು ಮಾಡಬೇಕೆಂದು ತೋಚದೆ ವಿಧಿಯನ್ನು ಹಳಿಯುತ್ತಾ ಕುಳಿತಿದ್ದರು. ಆಗ ಯೋಧನೊಬ್ಬ ಧೈರ್ಯತುಂಬಿ ಅಜ್ಜಿಯನ್ನು ತನ್ನ ಹೆಗಲ ಮೇಲೆ ಕೂರಿಸಿಕೊಂಡು, ಜಾಗರೂಕತೆಯಿಂದ ದಾಟಿಸಿ ಜೀವ ಉಳಿಸಿದ. ಕೃತಜ್ಞತಾಭಾವದಿಂದ ಅಜ್ಜಿ ತನ್ನ ಕೊರಳಲ್ಲಿದ್ದ ಚಿನ್ನದ ಹಾರವನ್ನು ಸೈನಿಕನಿಗೆ ನೀಡಿದಳು. ಸೈನಿಕ ಆ ಹಾರವನ್ನು ಹಿಂತಿರುಗಿಸಿ ಹೇಳಿದ, 'ಅಜ್ಜಿ ಈ ಹಾರವನ್ನು ನಿನ್ನೂರಿಗೆ ಹೋದಾಗ ಮಾರಿ ಬರುವ ಹಣದಿಂದ ಬಡಮಕ್ಕಳಿಗೆ ಸಹಾಯ ಮಾಡು' ಎಂದು ಹೇಳಿದ. ಅಜ್ಜಿಗೆ ಆಗ ಅನಿಸಿರಬೇಕು, ಧನ್ಯ ಇಂಥ ಪುತ್ರನನ್ನು ಪಡೆದ ಮಾತೆ.



# ಬ್ರಿಟನ್ ಶಾಲೆಗಳಲ್ಲಿ ಸ್ವಾತಂತ್ರ್ಯ ಹೋರಾಟ ಪಾಠ

ಲಂಡನ್ ಸುದ್ದಿ ಇದು. ಇನ್ನು ಮುಂದೆ ಬ್ರಿಟನ್ನಿನ ಶಾಲಾ ಮಕ್ಕಳು ಭಾರತದ ಸ್ವಾತಂತ್ರ್ಯ ಹೋರಾಟವನ್ನು ವಿವರವಾಗಿ ಓದಬೇಕಾಗಿದೆ. ಇದಕ್ಕೆ ಅನ್ವಯವಾಗುವಂತೆ ಪಠ್ಯಕ್ರಮ ಪ್ರಕಟಿಸಲಾಗಿದೆ.

ಬ್ರಿಟನ್ನಿನ ಪಾರ್ಲಿಮೆಂಟ್ ಒಪ್ಪಿಕೊಂಡ ಮೇಲೆ 5ರಿಂದ 16 ವಯೋಮಾನದ ಮಕ್ಕಳು ಈ ಹೊಸ ಪಠ್ಯಕ್ರಮದಂತೆ ಕಲಿಯುತ್ತಾರೆ. '1901 ರಿಂದ ಪ್ರಸ್ತುತದವರೆಗೆ ಬ್ರಿಟನ್, ಯೂರೋಪ್ ಹಾಗೂ ವಿಶಾಲ ವಿಶ್ವದ ಸವಾಲುಗಳು' ಕುರಿತಂತೆ ವಿದ್ಯಾರ್ಥಿಗಳಿಗೆ ಕಲಿಸುವುದೇ ಹೊಸ ಪಠ್ಯ ರೂಪಿಸಿರುವುದಕ್ಕೆ ಕಾರಣ ಎನ್ನಲಾಗಿದೆ.

ವಿಶ್ವದ ಪ್ರಮುಖ ಘಟ್ಟದ ಇತಿಹಾಸವನ್ನೂ ಮಕ್ಕಳು ಓದಬೇಕೆಂಬ ದೃಷ್ಟಿಯಿಂದ ಮೊಗಲ್ ಭಾರತ (1526–1857) ಅವಧಿಯ ಚರಿತ್ರೆಯನ್ನು ಓದಲೂ ಪಠ್ಯಕ್ರಮದಲ್ಲಿ ಅಧ್ಯಾಯಗಳನ್ನು ಸೇರಿಸಲಾಗಿದೆ. ಅಲ್ಲದೆ ಚೀನಾದ ಕ್ವಿಂಗ್ ಕೈ ವಂಶ ಕುರಿತಂತೆಯೂ ಪಠ್ಯಕ್ರಮದಲ್ಲಿ ಅಳವಡಿಸಲಾಗಿದೆ.





# ಬಾಪು ಚಿತ್ರ ಕತೆ

ಭಾಗ : 7

ಚಿತ್ರಗಳು: ಸುನೀತಾ ಅವಧಾನಿ



ಅಪ್ಪನ ಅನಾರೋಗ್ಯದಲ್ಲೂ ಹೆಂಡತಿ ಜೊತೆ!



ಮಗನ ಕರ್ತವ್ಯ ನಿರ್ವಹಣೆ



ಉಪಚಾರ ಮಾಡುತ್ತಾ....



ಸಮಯ ಸಿಕ್ಕಾಗ ವಾಯು ವಿಹಾರ



ಬಂಧು ಜೊತೆ ಶುಶ್ರೂಷೆ. . .ಆದರೆ . .



ಸಾವಿನ ಸುದ್ದಿ ಬಂದೇ ಬಿಟ್ಟಿತು...

ಕತೆ

# ಬುದ್ಧಿವಂತ ರಾಜ



ಒಂದು ಊರಿನಲ್ಲಿ ಬಹಳ ಬುದ್ಧಿವಂತನಾದ ರಾಜ ರಾಜ್ಯವಾಳುತ್ತಿದ್ದ. ಊರಿನಲ್ಲಿ ಕಸದ ಸಮಸ್ಯೆಯಿಂದ ಪ್ಲೇಗ್, ಕಾಲರ ಮುಂತಾದ ಕಾಯಿಲೆ ಪ್ರಾರಂಭವಾಯಿತು. ಒಂದು ದಿನ ರಾಜ ಊರಿನ ಮುಖ್ಯ ರಸ್ತೆಯ ಮಧ್ಯಭಾಗದಲ್ಲಿ ರಾತ್ರಿ ಕಸವನ್ನು ಹಾಕಿಸಿದ. ಊರಿನ ಜನ ಅದನ್ನು ಸುತ್ತಿಕೊಂಡು ಹೋಗುತ್ತಿದ್ದರೆ ವಿನಃ ಚೊಕ್ಕಟ ಮಾಡಲು ಯಾರೂ ಮುಂದಾಗಲಿಲ್ಲ. ಒಂದು ದಿನ ಆ ಊರಿನ ಒಬ್ಬ ರೈತ ಜಮೀನಿನ ಕೃಷಿ ಕೆಲಸವನ್ನು ಮುಗಿಸಿಕೊಂಡು ಮನೆಗೆ ತೆರಳುವಾಗ, ಆ ಕಸದ ರಾಶಿಯನ್ನು ನೋಡಿದ. ತನ್ನ ಕೈಯಲ್ಲಿದ್ದ ಸನಿಕೆ(ಗುದ್ಲಿ)ಯಿಂದ ಕಸದ ರಾಶಿಯನ್ನು ಪಕ್ಕಕ್ಕೆ ಸರಿಸಿ ಚೊಕ್ಕಟ ಮಾಡಿದ. ಆಗ ಕಸದ ರಾಶಿಯಲ್ಲಿ ಒಂದು ಚೀಲ ಸಿಕ್ಕಿತು. ಅದನ್ನು ಅವನು ರಾಜನ ಬಳಿಗೆ ತೆಗೆದುಕೊಂಡು ಹೋಗಿ ತಲುಪಿಸಿದ. ಆಗ ರಾಜನು ಊರಿನ ಜನರ ಸಭೆಯನ್ನು ಕರೆದು ಬಡರೈತನನ್ನು ಬರಹೇಳಿದ. ಸಭೆಯಲ್ಲಿ. ಈ ಚೀಲ ಬಡರೈತನಿಗೆ ಕಸವನ್ನು ಚೊಕ್ಕಟ ಮಾಡುವಾಗ ಸಿಕ್ಕಿದೆ. ಈ ಚೀಲದಲ್ಲಿ ಒಂದು ಕಾಗದವಿತ್ತು. ಅದರ ಒಕ್ಕಣೆ ಹೀಗಿತ್ತು. ಈ ಕಸದ ರಾಶಿಯನ್ನು ಯಾರು ಚೊಕ್ಕಟ ಮಾಡುತ್ತಾರೊ ಅವರಿಗೆ ರಾಜನಿಂದ 10 ಸಾವಿರ ಚಿನ್ನದ ನಾಣ್ಯ ಹಾಗೂ ಊರಿನ ಆಡಳಿತಗಾರನಾಗಿ ನೇಮಿಸುವುದು ಎಂದಿತ್ತು. ಅದರಂತೆ ಬಡರೈತನಿಗೆ 10 ಸಾವಿರ ಚಿನ್ನದ ನಾಣ್ಯ ಹಾಗೂ ಊರಿನ ಆಡಳಿತಗಾರನಾಗಿ ನೇಮಿಸಲಾಯಿತು.

ಇದನ್ನು ತಿಳಿದ ಜನ ಮುಂದೆ ಊರಿನಲ್ಲಿ ಎಲ್ಲೇ ಕಸ ಬಿದ್ದಿದ್ದರು ಚೊಕ್ಕಟ ಮಾಡಲು ಪ್ರಾರಂಭಿಸಿದರು. ಅಂದಿನಿಂದ ಆ ಊರು ಕಾಯಿಲೆಯಿಂದ ಮುಕ್ತವಾಗಿ ಚೊಕ್ಕಟವಾಗಿ, ಸುಂದರವಾಗಿ ಇರಲು ಕಾರಣವಾಯಿತು.

ರಾಜನ ಈ ಬುದ್ಧಿವಂತಿಕೆ ಮತ್ತು ಸಮಯ ಪ್ರಜ್ಞೆಯಿಂದ ಊರಿನ ಜನರು ಸಂತೋಷವಾಗಿರಲು ಕಾರಣವಾಯಿತು.

**ಯಶಸ್ವಿನಿ ರಾಜೇಂದ್ರ (ರಾಜಸ್ಥಾನ)**

# ನಿಜವಾದ ಮಿತ್ರ



ಸಮರಭೂಮಿಯಲ್ಲಿ ಉಭಯ ದೇಶಗಳ ಸೈನಿಕರು ಗುಂಡಿನ ಮಳೆಗರೆಯುತ್ತಿದ್ದಾರೆ. ಸೈನಿಕನೊಬ್ಬ ಭಯ ಭೀತಿಯಿಂದ ನೋಡುತ್ತಿದ್ದ. ಅವನ ಪ್ರೀತಿಯ ಜೀವನ ಗೆಳೆಯ ಯುದ್ಧದಲ್ಲಿ ಹೋರಾಡುತ್ತ ಬಿದ್ದ. ತನ್ನ ರಕ್ಷಣಾ ಗೋಡೆ ಒಳಗೆ ಇದ್ದ ಈ ಸೈನಿಕ ಹೇಗಾದರೂ ಗೆಳೆಯನನ್ನು ಇತ್ತ ತರಬೇಕೆಂಬ ಛಲ ಉಂಟಾಯಿತು. ಆದರೆ ಹೇಗೆ? ತನ್ನ ಸೇನಾದಳದ ಮುಖ್ಯಸ್ಥನ ಬಳಿ, 'ಲೆಫ್ಟಿನೆಂಟ್ ನಾನು ಆ ಸ್ಥಳಕ್ಕೆ ಹೋಗಲಾ? ನನ್ನ ಮಿತ್ರನನ್ನು ಕರೆತರಲಾ?' ಎಂದು ಕೇಳಿದ. ತಲೆ ಮೇಲೆಲ್ಲಾ ಗುಂಡಿನ ಸದ್ದು. ಎರಡೂ ದೇಶಗಳ ರಕ್ಷಣಾ ಗೋಡೆ ಮಧ್ಯೆ ಮಿತ್ರ ಬಿದ್ದಿದ್ದ. 'ನೀನು ಹೋಗಬಹುದು', ಲೆಫ್ಟಿನೆಂಟ್ ಹೇಳಿದ, 'ಆದರೆ ಅದು ಪ್ರಯೋಜನವಾಗದು. ಬಹುಶಃ ನಿನ್ನ ಸ್ನೇಹಿತ ಸತ್ತಿರಬಹುದು. ನೀನು ಅನಗತ್ಯ ಅಪಾಯಕ್ಕೆ ಸಿಲುಕುವೆ!'

ಅವರ ಮಾತಿನಿಂದ ಸೈನಿಕ ವಿಚಲಿತನಾಗಲಿಲ್ಲ. ಅತ್ತ ಸಾಗಿದ.

ಪವಾಡ ಸದೃಶವೆಂಬಂತೆ ಅವನು ತನ್ನ ಸ್ನೇಹಿತ ಬಿದ್ದಿದ್ದ ಸ್ಥಳ ತಲುಪಿದ. ಅವನನ್ನು ಭುಜದ ಮೇಲೆ ಹಾಕಿಕೊಂಡು ತನ್ನ ದೇಶದ ರಕ್ಷಣಾಗೋಡೆ ಒಳಗೆ ಬರುವುದು ಅವನಿಗೆ ಸಾಧ್ಯವಾಯಿತು. ಗೋಡೆ ಒಳಗಿನ ಕಂದರದಲ್ಲಿ ಅವನು ಮಿತ್ರನೊಂದಿಗೆ ಇಳಿದಾಗ ಲೆಫ್ಟಿನೆಂಟ್ ಗಾಯಗೊಂಡಿದ್ದ ಸೈನಿಕನನ್ನು ಪರೀಕ್ಷಿಸಿದ. ಅವನ ಮಿತ್ರನತ್ತ ಕರುಣೆಯಿಂದ ತಿರುಗಿ, 'ನಿನಗೆ ಹೇಳಲಿಲ್ಲವೆ, ಪ್ರಯೋಜನ ಇಲ್ಲವೆಂದು? ನಿನ್ನ ಸ್ನೇಹಿತ ಸತ್ತಿದ್ದಾನೆ. ನೀನು ಗಾಯಗೊಂಡೆ!' 'ಆದರೆ, ಇದು ಪ್ರಯೋಜನವಾಯಿತು ಸರ್' , ಎಂದ ಸೈನಿಕ. ' ಏನು ಪ್ರಯೋಜನವೆಂದರೆ? ನಿನ್ನ ಗೆಳೆಯ ಸತ್ತಿದ್ದಾನೆ' ಎಂದು ಲೆಫ್ಟಿನೆಂಟ್ ಹೇಳಿದ. 'ಹೌದು ಸರ್, ಆದರೆ ಪ್ರಯೋಜನ ಏನೆಂದರೆ ನಾನು ಅಲ್ಲಿಗೆ ಹೋದಾಗ ಅವನು ಬದುಕಿದ್ದ! ಅವನು 'ಸಿಂಗ್, ನೀನು ಬರುತ್ತೀಯ ಅಂತ ನನಗೆ ಗೊತ್ತಿತ್ತು' ಎಂದ. ಅದು ನನಗೆ ತುಂಬಾ ತೃಪ್ತಿಕೊಟ್ಟಿತು, ಸರ್!' ಎಂದ. ಈ ಸೈನಿಕನ ಗದ್ಗದಿತ ದನಿ ಕೇಳಿ ಲೆಫ್ಟಿನೆಂಟ್ ಮೂಕನಾದ. ನಿಜವಾದ ಮೈತ್ರಿ ಕಂಡು ಅವನ ಕಣ್ಣಲ್ಲೂ ನೀರು

**ಇಂಟರ್‌ನೆಟ್‌ನಿಂದ. ದೇವಿ**

# ಈ ಸೂತ್ರ ಪಾಲಿಸಿ

ಡಾ॥ ಹೊ. ಶ್ರೀ



**ಆ**ರೋಗ್ಯವೆಂದರೆ ದೇಹ ಸೌಖ್ಯ. ಮೈಯಲ್ಲಿ ಯಾವ ರೋಗವು ಇಲ್ಲದೆ ದಿನಗಟ್ಟಲೆಯ ಸಾಮಾನ್ಯ ಕೆಲಸಗಳನ್ನು ಅನಾಯಾಸವಾಗಿ ನಡೆಸಬಲ್ಲವನೇ ಆರೋಗ್ಯಶಾಲಿ. ಅಂಥ ಮನುಷ್ಯ ದಿನಕ್ಕೆ ಹತ್ತು ಹನ್ನೆರಡು ಮೈಲಿ ಸರಾಗವಾಗಿ ನಡೆಯುವ ಹಾಗಿರಬೇಕು. ಸಾಧಾರಣ ಶರೀರ ಶ್ರಮದ ಕಾರ್ಯಗಳನ್ನು ಆಯಾಸವಿಲ್ಲದೆ ಮಾಡುವಂತೆ ಇರಬೇಕು. ಸಾಮಾನ್ಯವಾದ ಸರಳ ಆಹಾರವನ್ನು ಆತ ಅರಗಿಸಿಕೊಳ್ಳಬಲ್ಲ.

**ಗಾಳಿ**

ಗಾಳಿ ಜೀವಿಸಲು ಅತಿ ಮುಖ್ಯ. ಮನುಷ್ಯ ಆಹಾರ ಇಲ್ಲದೆ ಕೆಲವು ವಾರಗಳು ಬದುಕಿರಬಹುದು. ನೀರು ಇಲ್ಲದೆ ಕೆಲವು ಕಾಲ ಇರಬಹುದು. ಆದರೆ ಗಾಳಿ ಇಲ್ಲದೆ ಕೆಲವು ನಿಮಿಷಗಳಿಗಿಂತ ಹೆಚ್ಚು ಬದುಕಿರಲಾರ. ದಿನವೂ ಬೆಳಿಗ್ಗೆ ಬಾಯಿ ತೊಳೆಯುವಂತೆ ಮೂಗನ್ನೂ ಸಹ ಶುದ್ಧಿ ಮಾಡಬೇಕು. ನಾವು ಉಸಿರಾಡುವ ಗಾಳಿ ಸ್ವಚ್ಛವಾಗಿರಬೇಕು. ಶ್ವಾಸದ್ವಾರವಾದ ಮೂಗನ್ನು ಎಂದಿಗೂ ಮುಚ್ಚಬಾರದು. ಮಲಗುವ ಮುನ್ನ ಹಗಲು ಧರಿಸಿದ್ದ ಉಡುಪನ್ನು ಕಳಚಿ ಸಡಿಲ ಉಡುಪನ್ನು ಉಪಯೋಗಿಸಬೇಕು.

ಮಾನವ ದೇಹ ಪಂಚ ಭೂತಾತ್ಮಕ. ಅದರಲ್ಲಿ ಯಾವ ಒಂದನ್ನು ಬಿಟ್ಟರೂ ಸಾಧ್ಯವಿಲ್ಲ. ಆದ್ದರಿಂದ ಯಾರೂ ಗಾಳಿಗೆ ಅಂಜಬಾರದು. ನಮ್ಮ ಜನ ಸಾಧಾರಣವಾಗಿ ಗಾಳಿ ಬೆಳಕು ಬಾರದ ಹಾಗೆ ಮಾಡಿಕೊಂಡು ಆರೋಗ್ಯವನ್ನು ಕೆಡಿಸಿಕೊಳ್ಳುತ್ತಾರೆ ಎಳೆತನದಿಂದಲೇ ಶುದ್ಧವಾದ ಗಾಳಿಯಲ್ಲಿ ಬಯಲಿನಲ್ಲಿ ಬಾಳುವುದನ್ನು ಕಲಿತರೆ ದೇಹ ಗಟ್ಟಿಯಾಗಿ ಶೀತ ಮುಂತಾದ ಕಾಯಿಲೆ ಬರುವುದೇ ಇಲ್ಲ.

**ನೀರು**

ನೀರು ಜೀವನದ ಅಗತ್ಯಗಳಲ್ಲಿ ಇನ್ನೊಂದು. ನೀರಿಲ್ಲದೆ ಕೆಲವು ದಿನಕ್ಕಿಂತ ಹೆಚ್ಚು ಇರಲಾರೆವು. ನೀರೇ ಇಲ್ಲದ ಮರುಭೂಮಿಯಲ್ಲಿ ಮನುಷ್ಯ ಇರಲಾರ. ಆರೋಗ್ಯವಾಗಿರಬೇಕಾದರೆ ಪ್ರತಿಯೊಬ್ಬರೂ 24 ಗಂಟೆಗಳಲ್ಲಿ 2.5 ಕೆ.ಜಿ. ನೀರನ್ನಾಗಲಿ, ಬೇರೆ ದ್ರವಾಹಾರವನ್ನಾಗಲಿ ತೆಗೆದುಕೊಳ್ಳಬೇಕು. ಕುಡಿಯುವ ನೀರು ಶುದ್ಧವಾಗಿರಬೇಕು.

**ಸೂರ್ಯ**

ಬೆಳಕನ್ನು ಸಂಪೂರ್ಣವಾಗಿ ಉಪಯೋಗಿಸಿಕೊಳ್ಳದೆ ಪೂರ್ಣ ಆರೋಗ್ಯ ಸಿಗದಂತೆ ಮಾಡಿಕೊಳ್ಳುತ್ತೇವೆ. ಮೈಗೆ ನೀರಿನ ಮೀಹ(ಸ್ನಾನ) ಎಷ್ಟು ಅಗತ್ಯವೋ ಬೆಳಕಿನ ಮೀಹವೂ ಅಷ್ಟೇ ಅಗತ್ಯ, ಉಪಯುಕ್ತ. ಬಲಹೀನತೆ, ನಿಧಾನವಾಗಿ ರಕ್ತ ಸಂಚಲನೆಗಳಲ್ಲಿ ಎಳೆಬಿಸಿಲಿಗೆ ಮೈಯೊಡ್ಡುವುದು ಒಳ್ಳೆಯ ಪುಷ್ಟಿ ಕೊಡುತ್ತದೆ, ಮುಂಜಾನೆ ಸೂರ್ಯನಿಗೆ ಕ್ಷ-ಕಿರಣಗಳು ಹೆಚ್ಚು. ಸೂರ್ಯ ಕಿರಣಗಳಲ್ಲಿ ಇವು ಬಹಳ ಪರಿಣಾಮಕಾರಿ. ಬಿಸಿಲಿನಲ್ಲಿ ಮಲಗಿದಾಗ ರೋಗಿಗೆ ಥಂಡಿ ಎನಿಸಿದರೆ ಹೊದ್ದುಕೊಂಡು ಮಲಗಬಹುದು. ರೂಢಿಯಾದ ಹಾಗೆ ಮೈಯನ್ನು ಹೆಚ್ಚು ಹೆಚ್ಚು ಬಿಸಿಲಿಗೆ ನೀಡಬಹುದು. ಯಾರೂ ನೋಡಲಾರದಂಥ ಅಂತರಂಗ ಸ್ಥಳದಲ್ಲಿ ಬಿಸಿಲಿನಲ್ಲಿ ಬೆತ್ತಲೆಯಾಗಿ ಆಶಪತ ಹಾಕಿದರೂ ಒಳ್ಳೆಯದು. ಅಂಥ ಸ್ಥಳ ಸುಲಭವಾಗಿ ಸಿಗದಿದ್ದರೆ ಒಂದು ಲಂಗೋಟಿ ಧರಿಸಿ ಬಯಲಿನಲ್ಲಿ ಸೂರ್ಯ ಸ್ನಾನ ಮಾಡಬಹುದು. ಕ್ಷಯ ರೋಗಕ್ಕೆ ಇದು ಉತ್ತಮ ಔಷಧ. ಸೂರ್ಯ ಸ್ನಾನ ಈಗಾಗಲೇ ಪ್ರಕೃತಿ ಚಿಕಿತ್ಸೆ ಕ್ಷೇತ್ರದಿಂದ ಮುಂದೆ ಸಾಗಿ ಹೋಗಿದೆ.

**ಆಕಾಶ**

ನಮ್ಮ ಆರೋಗ್ಯವನ್ನು ಕಾಯಲು, ಸರಿಪಡಿಸಿಕೊಳ್ಳಲು ಈ ಆಕಾಶವನ್ನು ನಾವು ಉಪಯೋಗಿಸಬೇಕು.

ನಮಗೂ, ಅನಂತವಾದ ಆಕಾಶಕ್ಕೂ ನಡುವೆ ಯಾವ ಅಡ್ಡವನ್ನೂ ಒಡ್ಡಬಾರದು. ಈ ಮನೆ ಛಾವಣಿ, ಬಟ್ಟೆಬರೆ ಕೂಡ ನಮ್ಮನ್ನು ಆಕಾಶದ ಸಂಪರ್ಕದಿಂದ ತಡೆಯುತ್ತದೆ.

# ಬೆಳಗಾವಿಯಲ್ಲಿ ಸ್ವಾತಂತ್ರ್ಯದ ಕಿಡಿ






ಸ್ವಾತಂತ್ರ್ಯ ಚಳವಳಿ ಉಗ್ರಸ್ವರೂಪ ಪಡೆದು ಬ್ರಿಟಿಷರನ್ನು ನಿದ್ದೆಗೆಡಿಸಿತು. ಸ್ವಾತಂತ್ರ್ಯ ಹೋರಾಟಗಾರರನ್ನು ಹಿಡಿದು ಕೊಟ್ಟವರಿಗೆ ಬಹುಮಾನಗಳನ್ನು ಘೋಷಿಸಿದರು. ಆದರೂ ಬ್ರಿಟಿಷರಿಂದ ಈ ಭಾಗದ ಸ್ವಾತಂತ್ರ್ಯ ಚಳವಳಿಯನ್ನು ತಡೆಯಲು ಶಕ್ಯವಾಗಲಿಲ್ಲ.

**ಲಂ.ಪಾ. ಪೂಜಾರ**

ಬೆಳಗಾವಿ ಜಿಲ್ಲೆ ದೇಶದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಮಹತ್ವದ ಪಾತ್ರವನ್ನು ವಹಿಸಿ ತನ್ನ ಪ್ರಮುಖವಾದ ಕೊಡುಗೆಯನ್ನು ಅರ್ಪಿಸಿದೆ. ಮಹಾತ್ಮ ಗಾಂಧೀಜಿಯವರು 1915ರಂದು ದಕ್ಷಿಣ ಆಫ್ರಿಕಾದಿಂದ ಸ್ವದೇಶಕ್ಕೆ ಬಂದ ನಂತರ ದೇಶಾದ್ಯಂತ ಸಂಚರಿಸಿ ಭಾರತೀಯರ ಆಗಿನ ಸ್ಥಿತಿಗತಿಗಳನ್ನು ಅರಿತುಕೊಂಡರು. ಮುಂದೆ ಲೋಕಮಾನ್ಯ ಬಾಲಗಂಗಾಧರ ತಿಲಕರ ನಿಧನದ ನಂತರ 'ಗಾಂಧೀಯುಗ' ಪ್ರಾರಂಭವಾಯಿತು. ಮಹಾತ್ಮ ಗಾಂಧೀಜಿಯವರಿಗೆ ಬೆಳಗಾವಿ ಜಿಲ್ಲೆಯ ಕೆಲವು ಪ್ರಮುಖ ಸ್ವಾತಂತ್ರ್ಯಯೋಧರ ಸಂಪರ್ಕಗಳು ಬಂದವು. ಅಂತಹ ಪ್ರಮುಖ ನಾಯಕದಲ್ಲಿ 'ಕರ್ನಾಟಕದ ಸಿಂಹ'ರೆಂದೇ ಪ್ರಸಿದ್ಧರಾಗಿರುವ ಗಂಗಾಧರರಾವ ದೇಶಪಾಂಡೆಯವರು ಒಬ್ಬರು. ಬೆಳಗಾವಿ ನಗರದಿಂದ 25 ಕಿ.ಮೀ.ದೂರದಲ್ಲಿರುವ ಹುದಲಿಯ ದೇಶಪಾಂಡೆಯವರು ದೇಶಭಕ್ತಿ, ಧೈರ್ಯ, ನಿಷ್ಠೆ, ರಾಷ್ಟ್ರಾಭಿಮಾನ, ದೂರದೃಷ್ಟಿ ಹಾಗೂ ಜಾಗರೂಕತೆ ಮುಂತಾದ ಗುಣಗಳಿಂದ ಮಹಾತ್ಮ ಗಾಂಧೀಜಿಯವರಿಗೆ ತುಂಬಾ ಆಕರ್ಷಿತರಾದರು, ಹತ್ತಿರದವರಾದರು. ಅವರು ಮಹಾತ್ಮಾಜೀಯವರ ಆದೇಶದಂತೆ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಧುಮುಕಿದರು. ಬೆಳಗಾವಿ ಜಿಲ್ಲೆಯಾದ್ಯಂತ ಸ್ವಾತಂತ್ರ್ಯ ಹೋರಾಟಗಾರರನ್ನು ಸಂಘಟಿಸಿ ಚಳವಳಿಯ ರೂಪರೇಷೆಯನ್ನು ಮಾಡಿದರು. ಹುದಲಿ ಸುತ್ತುಮುತ್ತಲಿನ ಪ್ರದೇಶಗಳಾದ ಸುಲಧಾಳ, ಅಂಕಲಗಿ, ಅಕ್ಕತಂಗೇರಹಾಳ, ಪಾಶ್ಚಾಪೂರ, ಗೋಕಾಕ ಮುಂತಾದ ಗ್ರಾಮಗಳ ಸ್ವಾತಂತ್ರ್ಯಯೋಧರನ್ನು ಸಂಘಟಿಸಿದರು. ರಾಮಚಂದ್ರ ವಡವಿ, ಪುಂಡಲೀಕಜಿ ಕಾತಗಡೆ, ಅಣ್ಣು ಗುರೂಜಿ, ವಾಮನರಾವ ಬಿದರಿ, ರಂಗ ಕಾಮತ, ಜಯದೇವರಾವ ಕುಲಕರ್ಣಿ, ವೆಂಕಟೇಶ ಮಾಗಡಿ, ಹಣಮಂತರಾವ ಕೌಜಲಗಿ ಇನ್ನೂ ಅನೇಕ ಸ್ವಾತಂತ್ರ್ಯಯೋಧರು ಗಂಗಾಧರರಾಯರ ನೇತೃತ್ವದಲ್ಲಿ ಚಳವಳಿಗಳನ್ನು ನಡೆಸಲಾರಂಭಿಸಿದರು. 1922 ರಲ್ಲಿ ಗಂಗಾಧರರಾಯರು ಮಹಾತ್ಮ ಗಾಂಧೀಜಿಯವರ ಮುಂದಾಳತ್ವದಲ್ಲಿ ಕರ್ನಾಟಕ ಮಹಾರಾಷ್ಟ್ರ ಎರಡೂ ಪ್ರಾಂತಗಳಲ್ಲಿ ಶರವೇಗದಲ್ಲಿ ಸಂಚರಿಸಿ ಜನರಲ್ಲಿ ಸ್ವಾತಂತ್ರ್ಯದ ಮಹತ್ವವನ್ನು ಬಿಂಬಿಸಿದರು. 1924ರಲ್ಲಿ ಬೆಳಗಾವಿಯಲ್ಲಿ ಮಹಾತ್ಮಾಜೀಯವರ ಅಧ್ಯಕ್ಷತೆಯಲ್ಲಿ ನಡೆದ ಅಖಿಲ ಭಾತರ ಕಾಂಗ್ರೆಸ್ ಅಧಿವೇಶನದ ಸ್ವಾಗತಾಧ್ಯಕ್ಷರಾಗಿ ಗಂಗಾಧರರಾಯರು ಅಧಿವೇಶನದ ಪೂರ್ಣ ಜವಾಬ್ದಾರಿಯನ್ನು ವಹಿಸಿಕೊಂಡು ಯಶಸ್ವಿಗೊಳಿಸಿದರು. ಮತ್ತು ಮಹಾತ್ಮಜೀಯವರ ಮೆಚ್ಚುಗೆಯನ್ನು ಪಡೆದರು. ಅಧಿವೇಶನ ಸ್ಥಳಕ್ಕೆ 'ವಿಜಯ ನಗರ' ಎಂದು ಹೆಸರಿಸಲಾಗಿತ್ತು. ಈಗ ಸರಕಾರವು ಅಲ್ಲಿ 'ವೀರಸೌಧ' ನಿರ್ಮಿಸಿದೆ. ಕರ್ನಾಟಕದ ರಾಜಕೀಯ ಇತಿಹಾಸದಲ್ಲಿ ಈ ಅಧಿವೇಶನವು ಅವಿಸ್ಮರಣೀಯವಾಗಿದೆ.

1925–26ರಲ್ಲಿ ಮಹಾತ್ಮ ಗಾಂಧೀಜಿಯವರಿಂದ ಸ್ಥಾಪಿಸಲ್ಪಟ್ಟ 'ಅಖಿಲ ಭಾರತ ಚರಕಾ ಸಂಘ' ಮತ್ತು ಅಖಿಲ ಭಾರತ ಗ್ರಾಮೋದ್ಯೋಗ ಸಂಘ ಈ ಎರಡೂ ಸಂಘಗಳ ಕರ್ನಾಟಕ ಕಾರ್ಯದ ಮೂಲ ಸಂಸ್ಥಾಪಕರು ಮತ್ತು ಕರ್ನಾಟಕ ಪ್ರದೇಶ ಕಾಂಗ್ರೆಸ್‌ದ ಪ್ರಥಮ ಅಧ್ಯಕ್ಷರು ಗಂಗಾಧರರಾಯರಿದ್ದರು. ಹುದಲಿಯಲ್ಲಿಯ ಕುಮರಿ ಆಶ್ರಮ ಹಾಗೂ ಖಾದಿ ಕೇಂದ್ರಗಳು ಸ್ಥಾಪಿಸಲ್ಪಟ್ಟವು. 1930ನೇ ಉಪ್ಪಿನ ಸತ್ಯಾಗ್ರಹದಲ್ಲಿ ಗಂಗಾಧರರಾಯರು ಪ್ರಥಮ ಸತ್ಯಾಗ್ರಹಿಯಾಗಿದ್ದರು. 1932ರಲ್ಲಿ ಗಂಗಾಧರರಾಯರ ಕೋರಿಕೆಯಂತೆ ಹುದಲಿಯಲ್ಲಿ ಅಖಿಲ ಭಾರತ ಗಾಂಧೀ ಸೇವಾ ಸಮ್ಮೇಳನವು ಜರುಗಿತು. ಮಹಾತ್ಮ ಗಾಂಧೀ ಹಾಗೂ ಸಮ್ಮೇಳನಾರ್ಥಿಗಳು ತಂಗಲು ಮಾವಿನ ಗಿಡದಡಿಯಲ್ಲಿ ಕುಟೀರ ನಿರ್ಮಿಸಲಾಗಿತ್ತು. ಅವರು ಒಂದು ವಾರ ವಾಸ್ತವ್ಯ ಮಾಡಿದರು. ಸಮ್ಮೇಳನಕ್ಕೆ ಅಖಿಲ ಭಾರತ ಮುಂದಾಳುಗಳೂ ಹಾಗೂ ಕರ್ನಾಟಕ ಪ್ರಮುಖ ಕಾರ್ಯಕರ್ತರೂ ಜನಸಾಮಾನ್ಯರೂ ಕೂಡಿ ಹತ್ತು ಸಾವಿರಕ್ಕೆ

ಮೇಲ್ಪಟ್ಟು ಸಮುದಾಯ ನೆರೆದಿತ್ತು. ಸಮ್ಮೇಲನ ಯಶಸ್ವಿಯಾಗಿ ನೆರವೇರಿತು. ನಾಡಿನ ಜನತೆ ಗಾಂಧೀಜಿಯವರನ್ನು ಕಂಡು ಆಶೀರ್ವಚನ ಪಡೆದರು. ಮುಂದೆ ಬೆಳಗಾವಿ ಜಿಲ್ಲೆಯಲ್ಲಿ ಸ್ವಾತಂತ್ರ್ಯ ಚಳವಳಿ ಪ್ರಬಲಗೊಂಡಿತು.

ಪಾಶ್ಚಾಪೂರ ಭಾಗದಲ್ಲಿ ಅಣ್ಣೂ ಗುರೂಜಿ, ಶಾಮರಾವ ಜೋಶಿ, ರಾಜಾರಾಮ ದೇಶಪಾಂಡೆ, ವೆಂಕಣ್ಣಮಠದ ಮುಂತಾದವರು ಜನರನ್ನು ಸಂಘಟಿಸಿದರು. ಹುಕ್ಕೇರಿ ಭಾಗದಲ್ಲಿ ಅಪ್ಪಣ್ಣಗೌಡ ಪಾಟೀಲ, ಎಂ.ಪಿ. ಪಾಟೀಲ, ನಾನಾಸಾಹೇಬ ದೇಶಪಾಂಡೆ, ನಾಯ್ಕು ಮುಂತಾದವರು ಜವಾಬ್ದಾರಿ ವಹಿಸಿದರು. ಚಿಕ್ಕೋಡಿಯಲ್ಲಿ ಅಣ್ಣಾ ಬೇಡಗೆ, ಸಿದ್ದಗೌಡ ಬೇಡಕಿಹಾಳ, ಅಥಣಿ – ಎ.ಎಸ್ ಕುಲಕರ್ಣಿ, ಖಾನಾಪೂರ ಬಸಪ್ಪಣ್ಣಾ ಅರಗಾವಿ, ನಂದಗಡ ನಾಯ್ಕರು, ಸೌಂದತ್ತಿ – ವೆಂಕರೆಡ್ಡಿ, ಹೂಲಿ – ಅಣ್ಣಪ್ಪ ಪದಕಿ, ಬೈಲಹೊಂಗಲ ಭಾಗದಲ್ಲಿ ಕ್ರಾಂತಿವೀರ ವಾಲಿ ಚೆನ್ನಪ್ಪನವರು, ಚಿನ್ನಯ್ಯಸ್ವಾಮಿಗಳು ಓಂಕಾರಮಠ, ತಲ್ಲೂರ ರಾಯನಗೌಡರು, ಮುಧೋಳ ಭಾಗದಲ್ಲಿ ಹಣಮಂತರಾವ ಕೌಜಲಗಿಯವರು ಕುಂದರನಾಡ ಭಾಗದಲ್ಲಿ ಗಂಗಪ್ಪ ಯಮಕನಮರ್ಡಿ ಚನ್ನಬಸಪ್ಪ ಮಾಳಗಿ ಮ.ಕ.ಹೆಗ್ನಾಯ್ಕು, ಬಸಪ್ಪ ಭದ್ರಕಾಳಿ, ಗೌ.ಚ. ಪಾಟೀಲ, ತಿಪ್ಪಣ್ಣಾ ಬೆಟಗೇರಿ, ಅಲ್ಲಿಸಾಹೇಬ ವಾರೀಮನಿ, ಶೈಲಪ್ಪ ಕಾ–ಕತಿಕರ ಅಂಕಲಗಿ, ನಾ.ಬಂ. ದೇಶಪಾಂಡೆ, ಎನ್.ವಾಯ್. ತುಕ್ಕಾರ, ಸೋ.ಅ.ಮಳಗಲಿ, ಬಿ.ಆರ್. ಪಾಟೀಲ ಹಾಗೂ ಸುಲಧಾಳದ ಬಸವಣ್ಣೆಪ್ಪ ಜಕ್ಕಣ್ಣವರ, ಅಕ್ಕತಂಗೇರಹಾಳದ ಅಣ್ಣಾ ಬಸಪ್ಪ ಮರಲಿಂಗಣ್ಣವರ, ನಿಂಗಪ್ಪ ಕರಲಿಂಗಣ್ಣವರ, ಗೋಕಕದಲ್ಲಿ ಕಡಲಗಿಕರ, ಶಿವಶಂಕರಪ್ಪ ದೇವಪೂರ, ಶಂಕರಪ್ಪ ಭರಭರಿ, ದೇವಪೂರ, ಹುಲಕುಂದ ಮುಂಬರಡ್ಡಿ, ಹಾವನಾಳಿ ಬಾಳಪ್ಪ ಉದ್ದಪ್ಪ ಎತ್ತಿನಮನಿ, ಯಮನಪ್ಪ ಅರಭಾವಿ ಕೊಳವಿ ಭಾಳಪ್ಪ ಅಂಗಡಿ ಹುದಲಿಯ ವಾ.ನಾ. ಕದಮ ಮುಂತಾದವರು ಅಕ್ಕತಂಗೇರಿರಹಾಳ ಬಿದರಿ ವಾಮನಾಯರು ಹೀಗೆ ಜಿಲ್ಲೆಯಾದ್ಯಂತ ಚಳವಳಿಯಲ್ಲಿ ಭಾಗವಹಿಸಿದ್ದರು.



ಬೇರೆ ಇತರ ಜಿಲ್ಲೆಗಳಲ್ಲೂ ಸ್ವಾತಂತ್ರ್ಯ ಯೋಧರು ಬ್ರಿಟಿಷರ ಲಾಠಿಗಳ ಏಟುಗಳ ಪೆಟ್ಟುಗಳನ್ನು ಎದುರಿಸುತ್ತ ತಮ್ಮ ಚಳವಳಿಗಳನ್ನು ಮುಂದುವರಿಸಿದರು, ಅನೇಕ ಕಷ್ಟಕಾರ್ಪಣ್ಯಗಳನ್ನು ಎದುರಿಸಿ ಸೆರೆಮನೆ ಸೇರಿದರು. ಮಹಾತ್ಮ ಗಾಂಧೀಜಿಯವರ ಉಪ್ಪಿನ ಸತ್ಯಾಗ್ರಹದಲ್ಲಿ ಈ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರು ತುಂಬಾ ಬೆಂಬಲ ಕೊಟ್ಟು ಯಶಸ್ವಿಗೊಳಿಸಿದರು. ಭಾರತ ಸ್ವತಂತ್ರವಾಗುವವರೆಗೂ ಈ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರು ಎದೆಗುಂದದೇ ಹೋರಾಡಿ, ದೇಶಕ್ಕೆ ಸ್ವಾತಂತ್ರ್ಯ ತಂದುಕೊಡಲು ತಮ್ಮ ಪಾಲಿನ ಸೇವೆಯನ್ನು ಸಲ್ಲಿಸಿ ದೇಶ ಸ್ವಾತಂತ್ರ ಪಡೆಯಲು ಕಾರಣರಾದರು. ಬೆಳಗಾವಿ ಜಿಲ್ಲೆ ದೇಶದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ತನ್ನ ಅಳಿಲು ಸೇವೆ ಸಲ್ಲಿಸಿ ವಿಶೇಷ ಸ್ಥಾನ ಪಡೆದಿದೆ ಎಂದರೆ ತಪ್ಪಾಗಲಾರದು.

ದೇಶದ ಸ್ವಾತಂತ್ರ್ಯ ಹೋರಾಟದಲ್ಲಿ ಕರ್ನಾಟಕದ ಪಾತ್ರ ತುಂಬಾ ಅಗ್ರಸ್ಥಾನ ಪಡೆದಿದೆ. ಪ್ರಪ್ರಥಮವಾಗಿ ಸ್ವಾತಂತ್ರ್ಯ ಹೋರಟ 1852 ರಿಂದ ಕಿತ್ತೂರಿನ ಮಹಾರಾಣಿ ಚನ್ನಮ್ಮ ಹಾಗೂ ವೀರಯೋಧ ಸಂಗೊಳ್ಳಿ ರಾಯಣ್ಣ ಇವರಿಂದ ಪ್ರಾರಂಭವಾದದ್ದು ಕರ್ನಾಟಕದಿಂದ ಅದರಲ್ಲೂ ಬೆಳಗಾವಿ ಜಿಲ್ಲೆಯಿಂದ ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು.



## ಲೇಖಕರಿಗೆ ಸೂಚನೆ



- ಪತ್ರಿಕೆ ಲೇಖನಗಳಲ್ಲಿನ ಅಭಿಪ್ರಾಯ ಲೇಖಕರದ್ದು.
- ಲೇಖನಗಳ ಕುರಿತು ಮುಕ್ತ ಹಾಗೂ ಅರ್ಥಪೂರ್ಣ ಚರ್ಚೆಗೆ ಸ್ವಾಗತ.
- ಬಾಪು ಜೀವನ ನಿಮ್ಮ ಬದುಕಿಗೆ ಮಾರ್ಗದರ್ಶನ ನೀಡಿದೆಯೇ? ಅಂತಹ ಅನುಭವ ನಿಮ್ಮದಾಗಿದ್ದರೆ ನಮ್ಮ ಓದುಗರೊಂದಿಗೆ ಹಂಚಿಕೊಳ್ಳಿ.
- ನಿಮ್ಮೂರಿಗೆ ಗಾಂಧಿ ಬಂದಿದ್ದರೆಂದು ಹಿರಿಯರು ನೆನಪು ಮಾಡಿಕೊಳ್ಳುವರೇ? ನೆನಪು ಸ್ವಾರಸ್ಯವಾಗಿದ್ದರೆ ಚಿಕ್ಕದಾಗಿ ಬರೆದು ಕಳಿಸಿ. ಚಿತ್ರವಿದ್ದರೆ ಒಳಿತು. ಲೇಖನ ಹಾಳೆಯ ಒಂದೇ ಮಗ್ಗುಲಿಗೆ ಇರಲಿ
- ನಿಮ್ಮ ಶಾಲಾ ಕಾಲೇಜುಗಳಲ್ಲಿ, ನಿಮ್ಮೂರಿನಲ್ಲಿ ಗಾಂಧೀಜಿ ಅಥವಾ ಬಾಪು ವಿಚಾರ ಪ್ರತಿಪಾದನೆ ಕುರಿತಂತೆ ಕಾರ್ಯಕ್ರಮ ನಡೆದರೆ ನಮಗೆ ಪುಟ್ಟ ವರದಿ ಕಳುಹಿಸಿ. ಚಿತ್ರ ಸಹಿತವಾದರೆ ಅನುಕೂಲ.
- ಚಿತ್ರಗಳಿಗೆ ತಪ್ಪದೇ ಅಡಿಬರಹ (ಕ್ಯಾಪ್ಶನ್) ಬರೆಯಬೇಕು.
- ಗಾಂಧೀ ಕುರಿತ ಲೇಖನ, ಚಿತ್ರಗಳು ಸಂಗ್ರಹ ಎಂಬುವುದು ನಿಸ್ಸಂದೇಹ. ದಯವಿಟ್ಟು ಸಂಗ್ರಹ ಮೂಲ ತಿಳಿಸಿ.
- ಲೇಖನಗಳನ್ನು **amarabaapuchintana@gmail.com.** ಇಲ್ಲಿಗೆ ಕಳುಹಿಸಬಹುದು






# ಚಟುವಟಿಕೆಯ ಚಿಲುಮೆ ತುಮಕೂರು

**ಎಂ.ಎಸ್. ಹನುಮಂತರಾವ್**

**ರಾ**ಜ್ಯದ ಅಧಿಕಾರ 1881ರಲ್ಲಿ ಬದಲಾವಣೆಯಾದಾಗ ಮೈಸೂರು ರಾಜ್ಯದಲ್ಲಿ ಪ್ರಥಮವಾಗಿ ಪ್ರಜೆಗಳಿಂದ ಚುನಾಯಿತರಾದ ಸದಸ್ಯರು ತಮ್ಮ ಅಭಿಪ್ರಾಯವನ್ನು ತಿಳಿಸುವುದಕ್ಕಾಗಿ ಒಂದು ಸಮಿತಿಯನ್ನು ರಚಿಸಿದರು. 1885 ರಲ್ಲಿ ರಾಷ್ಟ್ರೀಯ ಕಾಂಗ್ರೆಸ್ ಸಂಸ್ಥೆ ಸ್ಥಾಪಿತವಾದ ಮೇಲೆ ಅದು ರಾಷ್ಟ್ರೀಯವಾಗಿ ಏನೇನು ಪ್ರಭಾವವನ್ನು ಬೀರಿತೋ ಆ ಎಲ್ಲ ಪರಿಣಾಮಗಳೂ ಮೈಸೂರು ರಾಜ್ಯದಲ್ಲಿ ಉಂಟಾಗಿದ್ದವು. ರಾಜ್ಯದಲ್ಲಿನ ನುರಿತ ಅನುಭವಿ ವ್ಯಕ್ತಿಗಳನ್ನೊಳಗೊಂಡ ಅಸೆಂಬ್ಲಿಯು 1907ರಲ್ಲಿ ರಚಿತವಾಯಿತು. ಸರ್ಕಾರದ ಕಾನೂನು ರಚನೆಯಲ್ಲಿ ಪಾಲ್ಗೊಳ್ಳುವ ಉದ್ದೇಶದಿಂದ ಈ ಸಭೆ ರಚನೆಯಾಯಿತು. ಆಡಳಿತ ಸೂತ್ರಗಳನ್ನು ತಮ್ಮ ಕೈಯಲ್ಲಿ ಹಿಡಿದಿದ್ದ ದಿವಾನರುಗಳು ಮಾತ್ರ ಮೇಲಿನವರ ಒತ್ತಾಯಕ್ಕೆ ಕಟ್ಟುಬಿದ್ದು ಎಚ್ಚರಿಕೆ ಕ್ರಮಗಳನ್ನು ಅನುಸರಿಸುತ್ತಿದ್ದರು. ಈ ದಿಸೆಯಲ್ಲಿ ಅನೇಕ ಸಾರ್ವಜನಿಕ ಮುಖಂಡರು ಮುಖ್ಯವಾಗಿ ಎಂ. ವೆಂಕಟಕೃಷ್ಣಯ್ಯನವರು ಪತ್ರಿಕೆ, ಸಭೆ, ಸಮುದಾಯಗಳ ಮೂಲಕವಾಗಿ ಜನರ ಹಕ್ಕುಗಳ ಬಗ್ಗೆ ಮತ್ತು ಪ್ರಜಾಪ್ರಭುತ್ವ ಸ್ಥಾಪನೆಯ ಬಗ್ಗೆ ತೀವ್ರ ಪ್ರಚಾರ ಕೈಗೊಂಡರು. 1918ರಲ್ಲಿ ಹೆಚ್. ಚೆನ್ನಯ್ಯ ಮತ್ತು ಇತರರು ಸೇರಿದ್ದ ಪ್ರಜಾಮಿತ್ರ ಮಂಡಳಿಯು ಹಿಂದುಳಿದ ವರ್ಗಗಳ ಹಿತಾಸಕ್ತಿಯ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿತ್ತು.

ತಿಪಟೂರಿನ ಗಣ್ಯವ್ಯಕ್ತಿಗಳಾಗಿದ್ದ ಡಿ.ಎಸ್. ಮಲ್ಲಪ್ಪನವರಿಂದ ಸ್ಥಾಪಿತವಾದ ಸ್ಥಳೀಯ 'ಪ್ರಜಾಪಕ್ಷ'ವು ಕಾರ್ಯ ತತ್ಪರವಾಯಿತು. ಮುಂದೆ ಪ್ರಜಾಮಿತ್ರ ಹಾಗೂ ಪ್ರಜಾಪಕ್ಷ ಮಿಲನಗೊಂಡವು. ನಂತರ ಕಾಂಗ್ರೆಸ್ ಜೊತೆ ವಿಲೀನಗೊಂಡವು. 1921ರ ನಂತರ ಜಿಲ್ಲೆಯಲ್ಲಿ ಅನೇಕ ಕಡೆ ಸಮಿತಿಗಳು ಆರಂಭವಾದವು. ಅವುಗಳಲ್ಲಿ ಪ್ರಥಮವಾಗಿ ತುಮಕೂರು ನಗರದಲ್ಲಿ ಕಾಂಗ್ರೆಸ್ ಸಮಿತಿ ರಚನೆಗೊಂಡು ಕಾರ್ಯ ತತ್ಪರವಾಯಿತು.

ಸ್ವದೇಶಿ ವಸ್ತುಗಳು ಹಾಗೂ ಖಾದಿ ಬಳಕೆ–ಯ ಚಳವಳಿ, ಸ್ಥಳೀಯ ಗೃಹ ಕೈಗಾರಿಕೆಗಳಿಗೆ ಉತ್ತೇಜನ, ಹರಿಜನರ ಉದ್ಧಾರ ಮುಂತಾದ ಅನೇಕ ರಾಷ್ಟ್ರೀಯ ಕಾರ್ಯಕ್ರಮಗಳನ್ನು ವ್ಯಾಪಕವಾಗಿ ಕೈಗೊಳ್ಳಲಾಯಿತು. ಮಹತ್ತರವಾದ ಈ ರಾಷ್ಟ್ರೀಯ ಚಳವಳಿಯು ತಾಳಕೆರೆ ಸುಬ್ರಮಣ್ಯಂರವರ ನೇತೃತ್ವದಲ್ಲಿ ಆರ್. ಚನ್ನಿಗ ರಾಮಯ್ಯ, ಕೆ.ರಂಗಯ್ಯಂಗಾರ್, ಡಿ. ರಾಮರಾವ್, ಬಿ.ಸಿ. ನಂಜಯ್ಯ, ಎಸ್. ಕೆ. ಸೆಟ್ಲೂರ್, ಎ.ಎಸ್. ರೇವಣ್ಣ, ಕೊಡ್ಲಾಪುರದ ತನ್ನಿ ಬಸಪ್ಪ ಮಾಲಿ, ಮರಿಯಪ್ಪ, ಕೆ. ಹೆಂಜೇರಪ್ಪ, ಬಿ. ಎಲ್. ಸಂಗಣ್ಣ ಇವರುಗಳ ಬೆಂಬಲದೊಂದಿಗೆ ತುಮಕೂರು ಜಿಲ್ಲೆಯಲ್ಲಿ ತೀವ್ರವಾಗಿ ನಡೆಯಿತು.

ಈ ಜಿಲ್ಲೆಯಲ್ಲಿ ಅನೇಕ ಮಂದಿ ಸ್ವಯಂ ಸೇವಕರು ಮತ್ತು ಮುಂಖಡರು ಬೇರೆ ಬೇರೆ ನಗರಗಳಿಗೆ ಹೋಗಿ ರಾಜಕೀಯ ಹೋರಾಟದಲ್ಲಿ ಭಾಗವಹಿಸಿದರು. ಇದೇ ಸುವರ್ಣ ಅವಕಾಶದಲ್ಲಿ ತುಮಕೂರು ನಗರದಲ್ಲಿ ಪ್ರಥಮವಾಗಿ ಹಿಂದೂಸ್ತಾನಿ ಸೇವಾದಲದ ಶಾಖೆಯು ಆರಂಭವಾಯಿತು. ಅದು ಯುವಕರಿಗೆ ರಾಷ್ಟ್ರೀಯತೆಯ ತರಬೇತಿಯನ್ನು ನೀಡಿತಲ್ಲದೆ ರಾಜಕೀಯ ಪ್ರಜ್ಞೆಯನ್ನು ತೀವ್ರವಾಗಿ ಮೂಡಿಸಿತು.

**ಬಾಪು ಭೇಟಿ**

1934ರ ಜನವರಿಯ 4ರಂದು ಗಾಂಧೀ ಸಾರ್ವಜನಿಕ ಸಭೆಯೊಂದನ್ನು ಕರೆದು ಜನರು ರಚನಾತ್ಮಕ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ಭಾಗವಹಿಸಬೇಕೆಂದು ಕೋರಿದರು. ಬಾಪುವಿನ ಈ ಕರೆಗೆ ಜನತೆಯು ಓಗೊಟ್ಟುದಲ್ಲದೆ ತನ್ನ ಪಾಲಿನ ಕಾಣಿಕೆಯನ್ನೂ ನೀಡಿತು. ತುಮಕೂರು ಜನತೆಯು ಗಾಂಧೀಜಿಗೆ ಸನ್ಮಾನ ಪತ್ರವನ್ನು ಅರ್ಪಿಸಿ ಗೌರವಿಸಿದ್ದಲ್ಲದೇ 1000 ರೂ. ಗಳ ಕಾಣಿಕೆಯನ್ನು ನೀಡಿತು. ಬಾಪೂವಿನ ಈ ಭೇಟಿಯು ತುಮಕೂರು ನಾಗರಿಕರ ಮೇಲೆ ಪೂರ್ಣ ಪರಿಣಾಮವನ್ನುಂಟು ಮಾಡಿತು ಮತ್ತು ರಾಷ್ಟ್ರೀಯ ಚಟುವಟಿಕೆಗೆ ವ್ಯಾಪಕ ರೂಪವುಂಟಾಯಿತು.

ಗಾಂಧೀಜಿ ನೀಡಿದ ಭೇಟಿ, ಆಡಿದ ಮಾತು ಮತ್ತು ಸ್ಫೂರ್ತಿಯಿಂದ ಇಡೀ ಜಿಲ್ಲೆ ಪ್ರಭಾವಿತವಾಯಿತು. ಎಲ್ಲೆಲ್ಲೂ ಸಭೆಗಳಾದವು. ಸ್ವಾತಂತ್ರ್ಯ ಚಳವಳಿಯ ಈ ಬಿರುಸಿನ ಹೊಡೆತಕ್ಕೆ ಮೈಸೂರು ಸರ್ಕಾರವು ಬೆಚ್ಚಿ ಬಿದ್ದಿತಾದರೂ ತನ್ನ ಬಂದೂಕದ ಅಧಿಕಾರ ಬಲದಿಂದ 1931ರಲ್ಲಿ ರಾಷ್ಟ್ರೀಯ ಚಳವಳಿಯನ್ನು ಬಹಿಷ್ಕರಿಸಿ ಪೊಲೀಸು ಕಾನೂನನ್ನು ಬಲಗೊಳಿಸಿದ್ದರಿಂದ ಜನತೆಯು

ಮತ್ತಷ್ಟು ರೊಚ್ಚಿಗೆದ್ದಿತು. ಅನೇಕ ಪ್ರಮುಖ ವಕೀಲರು, ವಿದ್ಯಾರ್ಥಿಗಳು ಚಳವಳಿಯಲ್ಲಿ ಭಾಗವಹಿಸಿ ಸ್ವಾತಂತ್ರ್ಯ ಸಂಗ್ರಾಮದ ಅಗ್ನಿಕುಂಡದಲ್ಲಿ ನೇರವಾಗಿ ಧುಮುಕಿದರು. ಟಿ. ಸುಬ್ರಮಣ್ಯಂ ಮುಂತಾದ ಪ್ರಮುಖ ಜನನಾಯಕರನೇಕರು ಚಳವಳಿಯನ್ನು ಮುನ್ನಡೆಸಿದರು. ಅಹಿಂಸಾತ್ಮಕವಾಗಿಯೇ ಹೋರಾಟ ನಡೆಯಿತು. 1930–31ರಲ್ಲಿ ತುಮಕೂರು ಜಿಲ್ಲೆಯಾದ್ಯಂತ ಮದ್ಯಪಾನ ನಿರೋಧ ಚಳವಳಿಯು ಕ್ರಿಯಾತ್ಮಕವಾಗಿ ನಡೆಯಿತು. ಸ್ವಯಂ ಸೇವಕರು ಹೆಗಲುಗಳ ಮೇಲೆ ಕೊಡಲಿಗಳನ್ನಿಟ್ಟು ಈಚಲ ವನಗಳಿಗೆ ನುಗ್ಗಿ ಸೇಂದಿ ಮರಗಳನ್ನು ಕಡಿದುರುಳಿಸಿದರು. ಹೆಂಡದಂಗಡಿಗಳ ಮುಂದೆ ಚಳವಳಿಯನ್ನು ನಡೆಸಿದರು. ಪೊಲೀಸರ ಲಾಠಿಗಳಿಗೆ ಹೆದರದೆ ಜನರು ಮುನ್ನುಗ್ಗಿ ಸೇಂದಿ ಮಾರಾಟವನ್ನು ತಡೆಗಟ್ಟಿದ ದೃಶ್ಯ ರೋಮಂಚನಕಾರಿಯಾಗಿತ್ತು. 1930ರಿಂದ32ರವರೆಗೂ ಬ್ರಿಟೀಷ್ ಭಾರತದ ಇತರ ಪ್ರಾಂತಗಳಲ್ಲಿ ನಡೆದ ಸ್ವಾತಂತ್ರ್ಯ ಚಳವಳಿಗಳಲ್ಲೆಲ್ಲಾ ತುಮಕೂರಿನವರು ಪ್ರಮುಖ ಪಾತ್ರ ವಹಿಸಿದರು. ಇದೇ ಸಂದರ್ಭದಲ್ಲಿ ಮರಿಯಪ್ಪನವರ ಮುಖಂಡತ್ವದಲ್ಲಿ ನಡೆದ ಅರಣ್ಯ ಸತ್ಯಾಗ್ರಹದಲ್ಲಿ ಶಿರಾಮ ಎಲಿಯೂರು, ವಡ್ಡನಹಳ್ಳಿ ಮತ್ತು ತಾವರೆಕೆರೆ ಗ್ರಾಮಗಳ ಪಾತ್ರವು ಸ್ಮರಣೀಯವಾದುದು. 1937ರ ನಂತರ ಬ್ರಿಟೀಷ್ ಭಾರತದ ಇತರ ರಾಜ್ಯಗಳಲ್ಲಿ ಪ್ರಜಾಪ್ರತಿನಿಧಿ ಪ್ರಭುತ್ವವು ಪ್ರಗತಿದಾಯಕವಾದ ಪ್ರಯುಕ್ತ ಮೈಸೂರು ರಾಜ್ಯದಲ್ಲೂ ಅದು ಮಾದರಿಯ ಸರ್ಕಾರ ರಚನೆಗೆ ಅವಕಾಶ ಉಂಟಾಯಿತು. 1938ರಲ್ಲಿ ಪ್ರತ್ಯೇಕ ಮೈಸೂರು ರಾಜ್ಯ ಸ್ಥಾಪನೆಗೆ ಒತ್ತಾಯ ತರಲಾಯಿತು. ಇದೇ ವರ್ಷ ತುಮಕೂರಿನಲ್ಲಿ ನಡೆದ ಮೈಸೂರು ಕಾಂಗ್ರೆಸ್ ಸಭೆಯ ಅಧ್ಯಕ್ಷತೆಯನ್ನು ಸಿದ್ದಲಿಂಗಯ್ಯನವರು ವಹಿಸಿದರು. ಈ ಸಭೆಯಲ್ಲಿ ವಿದುರಾಶ್ವತ್ಥದ ಗೋಲೀಬಾರ್ ದುರಂತ ಹಾಗೂ ಆಳರಸರ ದಬ್ಬಾಳಿಕೆಯನ್ನು ಖಂಡಿಸುವ ನಿರ್ಣಯಗಳಾದವು ಇದೇ ಸಭೆಯಲ್ಲಿ ಜವಾಬ್ದಾರಿ ಸರಕಾರ ಸ್ಥಾಪನೆಗಾಗಿ ತೀವ್ರ ಹೋರಾಟ ನಡೆಸಬೇಕೆಂದು ತೀರ್ಮಾನಿಸಲಾಯಿತು. 1942ರ ಆಗಸ್ಟ್‌ನಲ್ಲಿ ರಾಷ್ಟ್ರನಾಯಕರುಗಳನ್ನು ಬಂಧಿಸಿದಾಗ ಇತರ ಸ್ಥಳಗಳಲ್ಲಿನಂತೆ ತುಮಕೂರಿನಲ್ಲೂ ತೀವ್ರತರನಾದ ಪ್ರತಿಭಟನೆ ಮಾಡಲಾಯಿತು. ಈ ಚಳವಳಿಯು ಪ್ರಭಾವಿತವಾಗಿದ್ದು ಸ್ವಾತಂತ್ರ್ಯ ಹೋರಾಟ ಹೊಸ ತಿರುವನ್ನು ಪಡೆಯಿತು. ನಾಯಕರ ಮುಂದಾಳುತ್ವದಲ್ಲಿ ಹೋರಾಟ ನಡೆಯಿತು. 'ಕ್ವಿಟ್ ಇಂಡಿಯಾ' ಚಳವಳಿಯು ಕಾಳ್ಗಿಚ್ಚಿನಂತೆ ಹಬ್ಬಿ ತಿಪಟೂರಿನಲ್ಲಿ ಗುಂಡಿನೇಟಿನ ಪ್ರಸಂಗವೂ ನಡೆಯಿತು. ಮೈಸೂರಿನ ಸ್ವಾತಂತ್ರ್ಯಕ್ಕಾಗಿ ಮೈಸೂರು ಕಾಂಗ್ರೆಸ್ ಅಧಿವೇಶನವು 1946ರಲ್ಲಿ ತುಮಕೂರಿನಲ್ಲಿ ನಡೆದು ಹೊಸ ಮನ್ವಂತರವನ್ನೇ ಸ್ಥಾಪಿಸಿತು. ಹೀಗೆ ಮೈಸೂರು ರಾಜ್ಯವು ಭಾರತ ರಿಪಬ್ಲಿಕ್‌ನೊಡನೆ ವಿಲೀನವಾಗಲು ನಡೆದ ಆಂದೋಲನದಲ್ಲಿ ತುಮಕೂರು ಕಾಂಗ್ರೆಸ್‌ನವರು ಪ್ರಜಾಸರ್ಕಾರದ ಸ್ಥಾಪನೆಗಾಗಿ 1947ನೇ ಸೆಪ್ಟೆಂಬರ್ 1ರಲ್ಲಿ ಸತ್ಯಾಗ್ರಹವನ್ನು ಪ್ರಾರಂಭಿಸಿದರು. ಒಂದೂವರೆ ತಿಂಗಳ ಕಾಲ ಸತ್ಯಾಗ್ರಹ ಸಮರವು ಬಿರುಸಿನಿಂದ ನಡೆಯಿತು. ಲಾಠಿ ಪ್ರಹಾರ ಗೋಲಿಬಾರ್‌ಗಳಾದವು. ಕೆಲವು ಸತ್ಯಾಗ್ರಹಿಗಳು ಮಡಿದರು. ಸಾವಿರಾರು ಮಂದಿ ಗಾಯಗೊಂಡರು. ಅನೇಕರು ಸೆರೆಮನೆ ಸೇರಿದರು. ಕೊನೆಗೆ ಸರಕಾರವೂ ಸೋಲಬೇಕಾಯಿತು. 1947ರ ಅಕ್ಟೋಬರ್ 24ರಂದು ಆಗಿನ ಮೈಸೂರು ಕಾಂಗ್ರೆಸ್ ಮುಖಂಡರು ಮಹಾರಾಜರೊಡನೆ ಮಾತನಾಡಿ ಪ್ರಜಾ ಸರ್ಕಾರವನ್ನು ಸ್ಥಾಪಿಸಿದರು. ಸರ್ವಜಿತ್ ಸಂವತ್ಸರದ ವಿಜಯದಶಮಿ ದಿವಸ ನಮ್ಮ ಪ್ರಜಾ ಸರ್ಕಾರವು ಅಧಿಕಾರವನ್ನು ವಹಿಸಿಕೊಂಡಿತು. ಭಾರತ ಸಂವಿಧಾನವಿಲ್ಲದಿದ್ದ ಆ ಕಾಲದಲ್ಲಿ ಪ್ರಜಾಧಿಕಾರಕ್ಕೆ ಮನ್ನಣೆ ದೊರೆಯಿತು.



## ಆ ಭಯಂಕರ ದಿನ

ಶ್ರೀ ಸರ್ವಜಿತ ಸಂವತ್ಸರದ ಶ್ರಾವಣ ಬಹುಳ ಅಮಾವಾಸ್ಯೆಯ (14–9–1947) ಮೈಸೂರಿನ ಚರಿತ್ರೆಯಲ್ಲಿ ಅತ್ಯಂತ ವಿಷಾದಪೂರ್ವಕವಾಗಿದೆ. ಆ ದಿನ ಮೈಸೂರು ರಾಜ್ಯದ ಅನೇಕ ಮಂದಿ ನಿರಪರಾಧಿಗಳು ಮಡಿದರು. ಆ ಸಮಯದಲ್ಲಿ ದಿವಾನರು ಪ್ರಜೆಗಳಿಗೂ ಮಹಾರಾಜರಿಗೂ ಮಧ್ಯದಲ್ಲಿ ನಿಂತು ಪ್ರಜೆಗಳನ್ನು ಮಹಾರಾಜರ ಬಳಿಗೆ ಬಿಡದೆ ತಡೆದು ಮಹಾರಾಜರಿಗೆ ಪ್ರಜೆಗಳ ವಿಷಯದಲ್ಲಿ ಅವಿಶ್ವಾಸ ಹುಟ್ಟುವಂತೆ ಮಾಡಿ ಸರ್ವಾಧಿಕಾರವನ್ನು ತಾವೇ ವಹಿಸಿಕೊಂಡು ಪ್ರಜೆಗಳ ಮೇಲೆ ಕಠೋರವಾದ ದಬ್ಬಾಳಿಕೆಯನ್ನು ನಡೆಸಿ ಅಪಕೀರ್ತಿಗೂ ಗುರಿಯಾದರು.

ಆ ದಿನ ಅಂದರೆ 1947ನೇ ಸೆ. 14ರ ಕರಾಳ ಅಮಾವಾಸ್ಯೆಯ ದಿನ ತುಮಕೂರು ಸಹ ರಕ್ತದ ಮಡುವಿನಲ್ಲಿ ತೊಯ್ದು ಹೋಯಿತು. ಅಂದು ನಡೆದ ಮಹಾ ಸತ್ಯಾಗ್ರಹ ಸಮರದಲ್ಲಿ ಮುಖ್ಯರಾದವರು ಹೈಸ್ಕೂಲ್ ಮತ್ತು ಕಾಲೇಜು ವಿದ್ಯಾರ್ಥಿಗಳು ಎಂದ–ರೆ ತಪ್ಪಾಗಲಾರದು. ತುಮಕೂರಿನ ಸ್ವತಂತ್ರ ಚೌಕದಲ್ಲಿ ನಡೆದ ಪ್ರಚಂಡ ಸತ್ಯಾಗ್ರಹ, ಸ್ವಾತಂತ್ರ್ಯ ವೀರರ ಈ ಬೃಹತ್ ಪ್ರಮಾಣದ ಚಳವಳಿಗೆ ಆಳರಸರ ಅಳ್ಳೆದೆ ತಲ್ಲಣಿಸಿತು. ಸರ್ಕಾರದ ವಿರುದ್ಧ ಘೋಷಣೆ,

ಭಾಷಣಗಳೂ ಅಧಿಕಾರಿಗಳನ್ನು ನಡುಗಿಸಿತು. ಭೀತಿಗೊಂಡು ದಿಕ್ಕು ತೋರದೆ ಸರ್ಕಾರ ಕೆರಳಿತು. ನಿರಂಕುಶತ್ವದ ಭೀಕರತ್ವ ಗರ್ಜಿಸಿತು. ಸರ್ಕಾರದ ಅತ್ಯುಗ್ರ ಕೋಪ, ಪೊಲೀಸಿನವರ ಹುಚ್ಚು ಆಕ್ರೋಶ, ಅಧಿಕಾರಿಗಳ ಅವಿವೇಕ ಪೂರ್ಣ ಆಜ್ಞೆ, ಲಾಠಿ ಪ್ರಹಾರ ಮತ್ತು ಗೋಲೀಬಾರ್‌ಗಳ ಸುರಿಮಳೆ ಈ ಸ್ವಾತಂತ್ರ್ಯರಣಾಗ್ನಿಗೆ ತುತ್ತಾಗಿ ಮೂರು ಮಂದಿ ಮರಣಿಸಿದರು. ತುಮಕೂರಿನ ಇಂಟರ್‌ಮಿಡಿಯೆಟ್ ಕಾಲೇಜಿನಲ್ಲಿ ವ್ಯಾಸಂಗ ಮಾಡುತ್ತಿದ್ದ ವಿದ್ಯಾರ್ಥಿ ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರ ಪುತ್ರ ರಾಮಚಂದ್ರ, ಮಂಡಿಪೇಟೆಯಲ್ಲಿ ಇಡ್ಲಿ ಮತ್ತು ದೋಸೆಗಳ ಮಾರಾಟದಲ್ಲಿ ತೊಡಗಿದ್ದ ಗಂಗಪ್ಪನೆಂಬ ವೀರಶೈವ ತರುಣ ಹಾಗೂ ಸಂತೆಪೇಟೆಯಲ್ಲಿ ವಾಸವಾಗಿದ್ದ ನಂಜುಡಪ್ಪ ಎಂಬ ಗಾಣಿಗರ ತರುಣ ಈ ಮೂವರು ಅಂ–ದು ನಡೆದ ಗೋಲೀಬಾರಿನ ಗುಂಡುಗಳಿಗೆ ಬಲಿಯಾಗಿ ಪ್ರಾಣವನ್ನು ತೆತ್ತರು. ವಿದ್ಯಾರ್ಥಿ ರಾಮಚಂದ್ರನು ಉತ್ಸಾಹೀ ತರುಣ. ಭಾವಾವೇಶ ಪೂರ್ಣನಾದ ವೀರ ಸತ್ಯಾಗ್ರಹಿ. ಅವನದು ಭಾವಾವೇಶಪೂರಿತವಾದ ಮರಣ. ಗಂಗಪ್ಪನದು ಆಕಸ್ಮಿಕ ಮರಣ. ಸತ್ಯಾಗ್ರಹಕ್ಕೂ ಅವನಿಗೂ ಯಾವುದೇ ಸಂಬಂಧವೂ ಇರದಿದ್ದರೂ ಭಾಷಣಗಳಿಂದ ಉತ್ತೇಜಿತವಾಗಿ ತುಂಬಿ ಬಂದ ಆವೇಶದಿಂದ ಮುನ್ನುಗ್ಗಿ ಬಂದು ಗುಂಡಿನೇಟಿಗೆ ಬಲಿಯಾದನು. ನಂಜುಡಪ್ಪನು ಸತ್ಯಾಗ್ರಹಿ, ಲಾಠಿ ಪ್ರಹಾರದಿಂದ ಉದ್ರೇಕಗೊಂಡು ಜನತೆಯ ಗುಂಪಿನಲ್ಲಿ ಸೇರಿದ್ದವನು.

ತಾಯ್ನಾಡಿನ ಕರೆಗೆ ಓಗೊಟ್ಟು ಹುತಾತ್ಮರು, ಅಮರ ಜೀವಿಗಳೂ ಆದ ಈ ಮೂವರನ್ನು ತುಮಕೂರು ನಗರವೂ ಮರೆತಿಲ್ಲ. ಸ್ವತಂತ್ರ ಭಾರತಕ್ಕಾಗಿ ಸ್ವತಂತ್ರ ಮೈಸೂರಿಗಾಗಿ ನಡೆದ ಸತ್ಯಾಗ್ರಹ ಸಮರದಲ್ಲಿ ಹೋರಾಡಿ ಬಲಿದಾನ ಮಾಡಿದ ಹುತಾತ್ಮರ ನೆನಪಿಗಾಗಿ ಸ್ಮಾರಕ ಶಿಲಾಸ್ತಂಭವೊಂದನ್ನು ತುಮಕೂರಿನ ಸ್ವತಂತ್ರ ಚೌಕದಲ್ಲಿ ನಿರ್ಮಿಸಲಾಗಿದೆ. ಅಲ್ಲದೆ ತುಮಕೂರಿನ ಮಂಡಿಪೇಟೆಯಲ್ಲಿ ಸ್ವಾತಂತ್ರ್ಯ ಹೋರಾಟಗರರ ನೆನಪಿಗಾಗಿ 'ವೀರಸೌಧ'ವನ್ನು ನಿರ್ಮಿಸಲಾಗಿದೆ. ಇದನ್ನು ಸ್ವಾತಂತ್ರ್ಯ ಹೋರಾಟದ ನೆನಪಿಗಾಗಿ ವಸ್ತುಸಂಗ್ರಹಾಲಯವನ್ನಾಗಿಸಿ, ಸಾರ್ವಜನಿಕರಿಗೆ ಮತ್ತು ಪ್ರವಾಸಿಗರಿಗೆ ದೊರಕಿಸಿಕೊಡುವುದು ಅವಶ್ಯಕವಾಗಿದೆ.

ಚಿಂತನೆ

# ಸಾಮಾಜಿಕ ನ್ಯಾಯ ಆರ್ಥಿಕ ಸ್ವಾತಂತ್ರ್ಯ

'ರಾಷ್ಟ್ರದ ಅಭಿವೃದ್ಧಿ ಹಳ್ಳಿಯನ್ನು ಚೈತನ್ಯಪೂರ್ಣವನ್ನಾಗಿ ಮಾಡುವುದರಲ್ಲಿ ಅಡಗಿದೆ. ಹಳ್ಳಿಗಳ ನಾಡಾದ ಭಾರತ ಪಾಶ್ಚಾತ್ಯ ಮಾದರಿಯ ಅಭಿವೃದ್ಧಿಯನ್ನು ಅನುಕರಣೆ ಮಾಡುವುದರಲ್ಲಿ ಸ್ವಲ್ಪವೂ ಅರ್ಥವಿಲ್ಲ. ನಮ್ಮ ದೇಶದಲ್ಲಿ ಎಲ್ಲ ಆರ್ಥಿಕ ಚಟುವಟಿಕೆಯ ಕೇಂದ್ರ ಬಿಂದು 'ಹಳ್ಳಿ' ಯಾಗಿರಬೇಕು'.

ಡಾ|| ಸಿ.ಕೆ. ರೇಣುಕಾರ್ಯ

**ಬೃ**ಹತ್ಪ್ರಮಾಣದ ಉತ್ಪಾದನೆಯ ಯುಗದಲ್ಲಿ ಬದುಕುತ್ತಿರುವ ನಾವು, ಗಾಂಧೀಜಿಯವರು ವಾದಿಸುವ 'ಬಯಕೆಯನ್ನೇ ಕಡಿಮೆ ಮಾಡಿಕೊಳ್ಳಬೇಕು' ಎಂಬುದನ್ನು ಕಲ್ಪಿಸಿಕೊಳ್ಳುವುದು ಕಷ್ಟವೇ! ಆದರೆ ಭಾರತೀಯ ಆರ್ಥಿಕತೆ ಚೌಕಟ್ಟಿನಲ್ಲಿ ಗಾಂಧೀಜಿಯವರ ವಾದವನ್ನು ಅರ್ಥ ಮಾಡಿಕೊಳ್ಳುವುದು ಕಷ್ಟವಲ್ಲ. ಸ್ವಂತ ಇಚ್ಛೆಯಿಂದ ತಮ್ಮ ಬಯಕೆಗಳನ್ನು ತ್ಯಜಿಸಿದ ಋಷಿವರ್ಯರು ಸರ್ವರ ಗೌರವಕ್ಕೆ ಪಾತ್ರರಾಗಿರುವ ಶ್ರೇಷ್ಠರು. ಬಯಕೆಗಳನ್ನೇ ಕಡಿಮೆ ಮಾಡಿಕೊಂಡರೆ, ಮಾನವನ ಕಲ್ಯಾಣ ವೃದ್ಧಿಸುತ್ತದೆ ಎಂಬ ಗಾಂಧೀ ನೈತಿಕ ವಾದವನ್ನು ಈ ಹಿನ್ನಲೆಯಲ್ಲಿ ತಳ್ಳಿಹಾಕುವುದು ಸುಲಭವೇನಲ್ಲ. ನೈತಿಕತೆಯನ್ನು ಉಳಿಸಿಕೊಳ್ಳುವ ಆರ್ಥಿಕ ಚಟುವಟಿಕೆ ಸ್ವಾಗತಾರ್ಹ. ಇಂತಹ ಆರ್ಥಿಕ ಚಟುವಟಿಕೆ ಶ್ರೀಮಂತಿಕೆಯನ್ನು ವೃದ್ಧಿಸದಿದ್ದರೂ ಚಿಂತೆಯಿಲ್ಲ. ಆದ್ದರಿಂದ ಗಾಂಧೀಜಿಯವರ ಆರ್ಥಿಕ ಚಿಂತನೆಯಲ್ಲಿ ಅಂತರ್ಗತವಾಗಿರುವ ಅತಿಮುಖ್ಯ ವಿಷಯವೆಂದರೆ ನೈತಿಕತೆ. ಈ ಅಂಶವೇ ಅವರನ್ನು ಇತರ ಆರ್ಥಿಕ ಚಿಂತಕರಿಂದ ಭಿನ್ನಮಾಗಿರುವಂತೆ ಮಾಡಿರುವುದು.

ಗಾಂಧೀಜಿಯವರು, ಎಲ್ಲ ಸಮರ್ಥ ಶರೀರಗಳಿಗೂ ಉದ್ಯೋಗ ದೊರಕಿಸಿ ಕೂಡಲೇಬೇಕೆಂದು ಭಾವಿಸಿದ್ದರು. ಇಂತಹ ಉದ್ಯೋಗ ಸೃಷ್ಟಿ ಯಂತ್ರೀಕರಣದಿಂದ ಖಂಡಿತ ಸಾಧ್ಯವಿಲ್ಲವೆಂದು ನಂಬಿದ್ದರು. ವಿದ್ಯುತ್ ಅಥವಾ ಅಣುಶಕ್ತಿಯನ್ನು ಬಳಸಿ ಎಲ್ಲರಿಗೂ ಉದ್ಯೋಗ ದೊರೆಯುವ ಔದ್ಯೋಗೀಕರಣ ನಡೆಯುವುದಾದರೆ, ಅದಕ್ಕೆ ತಮ್ಮ ವಿರೋಧವಿಲ್ಲವೆಂದು ಅಭಿಪ್ರಾಯಪಟ್ಟಿದ್ದರು. ಆದರೆ ಇವುಗಳಿಂದ ಆ ಕಾರ್ಯ ಸಾಧ್ಯವಿಲ್ಲವೆನ್ನುವುದೂ ಅವರ ಖಚಿತ ಭಾವನೆಯಾಗಿತ್ತು. ಭಾರತದಲ್ಲಿ ವ್ಯಾಪಕ ಶ್ರಮ ಶಕ್ತಿ ಇರುವುದರಿಂದ ಮತ್ತು ಬಂಡವಾಳದ ಕೊರತೆಯಿರುವುದರಿಂದ, ಗ್ರಾಮೀಣ ಉದ್ಯಮ ಮತ್ತು ಖಾದಿ ಉದ್ಯಮದಿಂದ ಮಾತ್ರ ಉದ್ಯೋಗ ಸೃಷ್ಟಿ ಸಾಧ್ಯವೆನ್ನುವುದು ಅವರ ಭಾವನೆಯಗಿತ್ತು.

ಬೃಹತ್ಪ್ರಮಾಣದ ಉತ್ಪಾದನೆಯನ್ನು ಗಾಂಧೀಜಿ ತೀವ್ರವಾಗಿ ವಿರೋಧಿಸಿದ್ದರು. ಪ್ರಪಂಚದ ಎಲ್ಲ ರಾಷ್ಟ್ರಗಳೂ ಬೃಹತ್ಪ್ರಮಾಣದ ಉತ್ಪಾದನೆಯಲ್ಲಿ ತೊಡಗಿದರೆ, ಅವು ಉತ್ಪಾದಿಸುವ ಸರಕುಗಳಿಗೆ ಮಾರುಕಟ್ಟೆಯಾದರೂ ಎಲ್ಲಿರುತ್ತದೆ ಎನ್ನುವುದು ಅವರ ಪ್ರಶ್ನೆಯಾಗಿತ್ತು. ವಿಶ್ವದ ಆರ್ಥಿಕ ಬಿಕ್ಕಟ್ಟಿಗೆ ಬೃಹತ್ಪ್ರಮಾಣದ ಉತ್ಪಾದನೆಯೇ ಕಾರಣವೆಂದು ಅವರ ಅಭಿಪ್ರಾಯವಾಗಿತ್ತು. ಉತ್ಪಾದನೆ, ವಿತರಣೆ ಮತ್ತು ಉದ್ಯಮವನ್ನು ಸ್ಥಾಪಿಸುವ ಸ್ಥಳಗಳ ನಡುವೆ ಅತ್ಯಂತ ಹೆಚ್ಚಿನ ಸಂಯೋಜನೆ ಅಗತ್ಯವೆನ್ನುವುದು ಗಾಂಧೀಜಿಯವರ ಅಭಿಪ್ರಾಯವಾಗಿತ್ತು.

ಯಾವುದೇ ವ್ಯವಸ್ಥೆಯಲ್ಲಿ ಶೋಷಣೆ ಇರಬಾರದು. ಬೃಹತ್ಪ್ರಮಾಣದ ಕೈಗಾರಿಕೆಗಳು ಅನೇಕ ರೀತಿಯ ಶೋಷಣೆಗಳಿಗೆ ಎಡೆಮಾಡಿಕೊಡುತ್ತವೆ. ಒಬ್ಬರು ಮತ್ತೊಬ್ಬರನ್ನು ಶೋಷಿಸಲಾಗದಂತ ಒಂದು ಗ್ರಾಮೀಣ ವ್ಯವಸ್ಥೆಯನ್ನು ಗಾಂಧೀಜಿ ಮನಗಂಡಿದ್ದರು. ಪ್ರತಿಯೊಂದು ಗ್ರಾಮವೂ ತನಗೆ ಬೇಕಾದುದೆಲ್ಲವನ್ನೂ ಉತ್ಪಾದಿಸಿಕೊಳ್ಳಬೇಕು. ಬೇರೆ ಗ್ರಾಮಗಳ ಮೇಲೆ ಅವಲಂಬಿಸಬೇಕಾದರೂ ಇದು ಸಾಧ್ಯವಾದಷ್ಟು ಕಡಿಮೆ ಇರಬೇಕು.

ಗಾಂಧೀಜಿ ರಾಷ್ಟ್ರ ಆಹಾರದ ಸ್ವಾವಲಂಬನೆಯ ದೃಷ್ಟಿಯಿಂದ ಲಭ್ಯವಿರುವ ಭೂಮಿಯನ್ನು ಮುಖ್ಯವಾಗಿ ಆಹಾರದ ಉತ್ಪಾದನೆಗಾಗಿ ಒಳಪಡಿಸಬೇಕೆಂದು ಅಭಿಪ್ರಾಯಪಟ್ಟಿದ್ದರು. 1945ರಲ್ಲಿ ಆಹಾರದ ಕೊರತೆ ಇದ್ದಾಗ ಅವರು, ವೈಸ್ ರೀಗಲ್‌ನ ಬಂಗಲೆಯ ತೋಟದ ಜಮೀನೂ ಸೇರಿದಂತೆ ರಾಷ್ಟ್ರದಲ್ಲಿ ಲಭ್ಯವಿರುವ ಜಮೀನಿನಲ್ಲೆಲ್ಲಾ ಆಹಾರ ಧಾನ್ಯವನ್ನು ಉತ್ಪಾದಿಸಬೇಕೆಂದು ಸೂಚಿಸಿದ್ದರು.

ಈ ಹಿಂದೆಯೇ ತಿಳಿಸಿರುವಂತೆ ಮಹಾತ್ಮ

'ಖಾದಿ ಗ್ರಾಮೀಣ ಸೌರವ್ಯೂಹದ ಸೂರ್ಯನಿದ್ದಂತೆ. ಈ ಉದ್ಯಮದಿಂದ ಪಡೆಯುವ ಬೆಳಕು ಮತ್ತು ಇತರ ಸೌಲಭ್ಯಗಳಿಗೆ ಪ್ರತಿಯಾಗಿ ಖಾದಿ ಉದ್ಯಮಕ್ಕೆ ಬೆಂಬಲವಾಗಿ ನಿಂತಿರುವ ಇತರ ಗ್ರಾಮೀಣ ಉದ್ಯಮಗಳು ಈ ಸೌರವ್ಯೂಹದ ಉಪಗ್ರಹಗಳು'

ಗಾಂಧೀಜಿಯವರದು ವ್ಯವಸ್ಥಿತವಾದ ಆರ್ಥಿಕ ಚಿಂತನೆಯಲ್ಲ. ಭಾರತದ ಎಲ್ಲ ಜನರೂ ಸುಖ-ಸಂತೋಷದಿಂದಿರಬೇಕೆಂಬುದು ಅವರ ಭಾವನೆಯಾಗಿತ್ತು. ಬಡತನದ ನಿರ್ಮೂಲನೆ ಅವರ ಪರಮ ಧ್ಯೇಯವಾಗಿತ್ತು. ಗಾಂಧೀಜಿಯವರಿಗೆ ಖಾದಿ ಮತ್ತು ಗೃಹ ಉದ್ಯಮ ಭಾರತದ ಆರ್ಥಿಕ ಸ್ವಾತಂತ್ರ್ಯದ ಮತ್ತು ಸಮಾನತೆಯ ಕುರುಹುಗಳಾಗಿದ್ದವು. ಭಾರತದಂತಹ ವಿಶಾಲ ದೇಶಕ್ಕೆ, ಜನಸಂಖ್ಯೆಯ ಬಾಹುಳ್ಯವುಳ್ಳ ರಾಷ್ಟ್ರಕ್ಕೆ ಗ್ರಾಮೀಣ ಸ್ವಯಂ ತೃಪ್ತತೆಯಿಲ್ಲದೆ ಮುಕ್ತಿಯಿಲ್ಲ ಎನ್ನುವುದು ಗಾಂಧೀಜಿಯವರ ಖಚಿತ ನಂಬಿಕೆಯಾಗಿತ್ತು.

ಗಾಂಧೀಜಿಯವರ ಚಿಂತನೆ ಎಷ್ಟು ವಾಸ್ತವಿಕವಾದದ್ದು ಎನ್ನುವ ಪ್ರಶ್ನೆ ಏಳುವುದು ಸಹಜವೆ. ಈ ಪ್ರಶ್ನೆಗೆ ಉತ್ತರಿಸುವುದು ಬಹಳ ಕಷ್ಟ. ಅನೇಕ ವರ್ಷಗಳ ಅನುಭವದ ನಂತರವೂ ಗಾಂಧೀಜಿಯವರ ಚಿಂತನೆ ತುಂಬಾ ವಾಸ್ತವವಾದದ್ದು ಮತ್ತು ಶ್ರೇಷ್ಠವಾದದ್ದು ಎನ್ನುವ ಗುಂಪೂ ಇದೆ. ಅವರ ಚಿಂತನೆ ತುಂಬ ಆದರ್ಶವಾದದ್ದು, ವಾಸ್ತವಿಕತೆಗೆ ಸ್ವಲ್ಪವೂ ಸಂಬಂಧವಿಲ್ಲದು ಎನ್ನುವ ಗುಂಪೂ ಇದೆ.

ಗಾಂಧೀಜಿಯವರ ಅರ್ಥವ್ಯವಸ್ಥೆಯಲ್ಲಿ, ಬಂಡವಾಳದ ಸಂಚಯಕ್ಕೆ ಆಸ್ಪದವಿಲ್ಲ. ಇಡೀ ವ್ಯವಸ್ಥೆ ಕಡಿಮೆ ಶ್ರಮ ಉತ್ಪಾದಕತೆಗೆ ಸಂಬಂಧಿಸಿದುದು. ಭೌತಿಕ ಸರಕಿನ ಸಂಚಯ-ಕ್ಕೆ ವ್ಯಕ್ತಿಗಳು ಆಸೆಯನ್ನಿಟ್ಟುಕೊಳ್ಳಬಾರದು ಎನ್ನುವುದು ಸಾಧಿತವಾಗುವುದು ಕಷ್ಟ. ಭಾರತದಂತಹ ಅರ್ಥವ್ಯವಸ್ಥೆಯಲ್ಲಿ ಕಡಿಮೆ ಉತ್ಪಾದಕತೆ ಮತ್ತು ಕಡಿಮೆ ಬಂಡವಾಳ ಸಂಚಯದ ಮೂಲಕ ಹೇಗೆ ಎನ್ನುವುದು ಯಕ್ಷಪ್ರಶ್ನೆಯಾಗಿ ಉಳಿಯುತ್ತದೆ. ಹೆಚ್ಚು ಉತ್ಪಾದಿಸದೆ ಬಂಡವಾಳದ ಸಂಚಯ ಅಸಾಧ್ಯ. ನಮ್ಮ ದೇಶದಲ್ಲಿ ಬಲವಾದ ಕೃಷಿ ಕ್ಷೇತ್ರವನ್ನು ಸೃಷ್ಟಿಸದೆ ಮತ್ತು ಅದಕ್ಕೆ ಪೂರಕವಾದ ಕೈಗಾರಿಕಾ ಕ್ಷೇತ್ರವನ್ನು ಅಭಿವೃದ್ಧಿಪಡಿಸದೆ, ಗ್ರಾಮೀಣ ಪುನರುಜ್ಜೀವನ ಅಸಾಧ್ಯವೆಂದು ಹೆಚ್ಚಿನ ಅರ್ಥವಿಜ್ಞಾನಿಗಳ ಅಭಿಮತ.

ಆಧುನಿಕ ಅರ್ಥವ್ಯವಸ್ಥೆಯಲ್ಲಿ ಪ್ರತಿಯೊಂದು ರಾಷ್ಟ್ರವೂ ಆರ್ಥಿಕವಾಗಿ ತುಂಬಾ ಬಲಿಷ್ಠವಾಗಿರಬೇಕು. ಇದು ತುಂಬಾ ಶಕ್ತಿಯುತವಾದ ಕೈಗಾರಿಕಾ ಕ್ಷೇತ್ರದ ಅಭಿವೃದ್ಧಿಯಿಂದ ಮಾತ್ರ ಸಾಧ್ಯ. ಹೆಚ್ಚು ಉತ್ಪಾದಿಸಿ, ವಿದೇಶಗಳಿಗೆ ರಫ್ತು ಮಾಡಿ ಬಲವಾದ ರಾಷ್ಟ್ರೀಯ ಅರ್ಥವ್ಯವಸ್ಥೆಯನ್ನು ರೂಪಿಸಬೇಕೆಂಬುದು ಆಧುನಿಕ ಅರ್ಥಶಾಸ್ತ್ರಜ್ಞರ ಚಿಂತನೆ. ಈ ದೃಷ್ಟಿಯಿಂದ ನೋಡಿದಾಗ ಗಾಂಧೀಜಿಯವರ ಗ್ರಾಮೀಣ ಅರ್ಥವ್ಯವಸ್ಥೆ, ಕೈಗಾರಿಕೆಗಳ ವಿಕೇಂದ್ರೀಕರಣ ತುಂಬಾ ಟೊಳ್ಳಾದ ಆರ್ಥಿಕ ಸ್ವರೂಪಗಳೆಂದು ಗೋಚರವಾಗುತ್ತವೆ.

ಆದರೆ ಗಾಂಧೀಜಿಯವರ ಆಲೋಚನೆಗಳನ್ನು ಗೌರವಿಸುವ ಚಿಂತಕರಿಗೇನೂ ಕಡಿಮೆಯಿಲ್ಲ. ರಿಚರ್ಡ್ ಬಿ. ಗ್ರೇಗ್‌ರವರ ಮಾತುಗಳಲ್ಲಿ ಹೇಳುವುದಾದರೆ 'ಭಾರತ ಹಾಗೂ ವಿಶ್ವ ಹೇಗೆ ಮುಂದಿನ ಹೆಜ್ಜೆಗಳನ್ನಿಡಬೇಕು ಎಂಬುದನ್ನು ತೋರಿಸಿದ ಜಾಣ ವ್ಯಕ್ತಿ ಗಾಂಧೀಜಿ. ಆತ ಆರ್ಥಿಕ, ನೈತಿಕ ಹಾಗೂ ರಾಜಕೀಯ ವಿಚಾರಗಳಲ್ಲಿ, ಬುದ್ಧಿವಂತನಾಗಿದ್ದ. ಆತ ದೊಡ್ಡ ಅರ್ಥವಿಜ್ಞಾನಿ, ವ್ಯಾಪಾರಿ ಮತ್ತು ರಾಜಕೀಯಪಟು. ನೀವು ನಿಜವಾಗಲೂ ಆತನ ಬುದ್ಧಿಶಕ್ತಿಯನ್ನು ಮತ್ತು ಕಾರ್ಯ ವಿಧಾನಗಳನ್ನು ಅರಿತುಕೊಂಡಿದ್ದೀರಾ?

ಅನೇಕ ಆಧುನಿಕ ಅರ್ಥಶಾಸ್ತ್ರಜ್ಞರೂ ಸಹ ಗಾಂಧೀಜಿಯವರ ವಿಚಾರಗಳ ಹತ್ತಿರ-ಹತ್ತಿರಕ್ಕೆ ಬರುತ್ತಾರೆ. 1973ರಲ್ಲಿ ಷುಮಾಷರ್ ಪ್ರಕಟಿಸಿದ 'ಸಣ್ಣದೇ ಸುಂದರವಾದದ್ದು' ಗ್ರಂಥ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಮಧ್ಯಮ ಪ್ರಮಾಣದ ಶ್ರಮ ಪ್ರಧಾನವಾದ ಕೈಗಾರಿಕೆ ಎಷ್ಟು ಅನುಕೂಲಕರವಾದದ್ದು ಎನ್ನುವುದನ್ನು ಜಗತ್ತಿಗೆ ಸಾರಿದೆ. 70ರ ದಶಕದಲ್ಲಿ ತುಂಬಾ ಜನರ ಗಮನವನ್ನು ಸೆಳೆದಿರುವ ಗ್ರಂಥ ಇದು. ಇದರಲ್ಲಿ ಗಾಂಧೀಜಿಯವರಷ್ಟು ಆದರ್ಶಪ್ರಾಯವಾದ ವಾದಗಳಿಲ್ಲದಿದ್ದರೂ, ಕೈಗಾರಿಕೆಗಳಿಗೆ ಸಂಬಂಧಿಸಿದಂತೆ ಅವರ ಚಿಂತನೆಗೆ ಸಾಮ್ಯವಾದ ವಿಚಾರಗಳಿವೆ. ಗಾಂಧೀಜಿಯವರು ಯಾವಾಗಲೂ ಹೇಳುತ್ತಿದ್ದಂತೆ ಜನರು ಪ್ರಧಾನವೇ ಹೊರತು ವಸ್ತುಗಳಲ್ಲ ಎಂಬ ವಾದವನ್ನು ಷುಮಾಷರ್ ಎತ್ತಿ ಹಿಡಿಯುತ್ತಾರೆ.

**'ನಾವು ಸಹಕಾರಿ ಬೇಸಾಯವನ್ನು ಅಳವಡಿಸಿಕೊಳ್ಳದೆ, ಕೃಷಿಯ ಲಾಭವನ್ನು ಸಮಗ್ರವಾಗಿ ಪಡೆಯುವುದು ಸಾಧ್ಯವಿಲ್ಲವೆನ್ನುವುದು ನನ್ನ ಭಾವನೆ. ಗ್ರಾಮದ ನೂರಾರು ಕುಟುಂಬಗಳು ಒಟ್ಟಾಗಿ ಬೇಸಾಯ ಮಾಡುವುದು ಮತ್ತು ಅದ-ರಿಂದ ಬರುವ ಆದಾಯವನ್ನು ಹಂಚಿಕೊಳ್ಳುವುದು, ಜಮೀನನ್ನು ನೂರು ಭಾಗಗಳಾಗಿ ಮಾಡಿ, ಬೇಸಾಯ ಮಾಡುವುದಕ್ಕಿಂತ ಉತ್ತಮವಾದುದಲ್ಲವೇ? ಜಮೀನಿಗೆ ಅನ್ವಯವಾಗುವ ಈ ಮಾತು ಬಂಡವಾಳಕ್ಕೂ ಸಹ ಅನ್ವಯವಾಗುತ್ತದೆ'.**

ವಾಸ್ತವವಾಗಿ ಪ್ರಪಂಚದ ಅನೇಕ ರಾಷ್ಟ್ರಗಳ ಬಡತನವು ಅಭಿವೃದ್ಧಿ ಅರ್ಥಶಾಸ್ತ್ರಜ್ಞರನ್ನು ಮರುವಿಚಾರ ಮಾಡುವಂತೆ ಮಾಡಿದೆ. ಉತ್ಪಾದನೆಯೇ ಮುಖ್ಯವಾದದ್ದು, ಯಾವ ಮಾರ್ಗದಿಂದಲಾದರೂ ಸರಿ ರಾಷ್ಟ್ರದ ನೈಜ ಆದಾಯವನ್ನು ವೃದ್ಧಿಪಡಿಸಿಕೊಳ್ಳುತ್ತಾ ಹೋಗಬೇಕು ಎನ್ನುವ ವಿಚಾರ ಈಗ ಸಡಿಲಗೊಂಡಿದೆ. ಮನುಷ್ಯ ಮುಖ್ಯ, ರಾಷ್ಟ್ರದ ಎಲ್ಲ ಜನರ ಅಗತ್ಯಗಳೂ ಸ್ವಲ್ಪವಲ್ಲ. ಸ್ವಲ್ಪ ಪೂರೈಕೆಯಾಗಬೇಕು ಎನ್ನುವ ವಿಚಾರ ಈಗ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಮೂಡುತ್ತಿದೆ. ಅಂದರೆ ನಾವು ಗಾಂಧೀಜಿಯವರನ್ನು ಮತ್ತೆ ಸ್ಮರಿಸುವಂತಾಗಿದೆ. ಈಗ ರಾಜಕೀಯ ಸ್ವಾತಂತ್ರ್ಯಕ್ಕಾಗಿಯಲ್ಲ. ಆದರೆ ಆರ್ಥಿಕ ಸ್ವಾತಂತ್ರ್ಯ ಮತ್ತು ಸರ್ವೋದಯಯಕ್ಕಾಗಿ!

**(ಕಳೆದ ಸಂಚಿಕೆಯ ಮುಂದುವರಿದ ಭಾಗ)**

**ಕೃಪೆ: ಗಾಂಧಿ ಸ್ಮಾರಕ ನಿಧಿ**
**ಸುವರ್ಣ ಮಹೋತ್ಸವ ಸಂಚಿಕೆ**



Brain Bash

# Cross Word 2







**Answers for July Cross Word**

## Across

3.India
4. Hindu
5. Mahatma
7. South Africa
8. Satyagraha
9. Salt
10. Nehru
11. Caste

## Down

1.Kasturbai
2.Untouchable
6.Fasting

## Across

1. Gandhiji remained in South Africa for ______ years. (6)
4. In 1909, on a trip back to India, Gandhi authored a short treatise entitled: (10)
6. Part of the inspiration for Ghandhiji's policy came from which Russian writer? (10)
9. As a remedy for virtual destruction of industries GandhiJi advocated revival of which Industries: (7)
10. An Indian Firm retained Gandhiji as legal adviser in its office in _____ (South African City) (6)
14. On returning to India Gandhiji attempted to establish a law practice in this city? (6)
15. The oppressed class of what were then called untouchables in Gandhiji's Period. (8)
16. Gandhiji's Ashram in Ahmedabad is Named as: (9)
17. A demonstration against Which Acts resulted in a massacre of Indians at Amritsar (7)
18. A march to the sea campaign by Gandhiji was started from which Indian City: (9)
19. In 1888 when Gandhiji left for England to study law, His Son _____ was Few months Old. (7)
20. Who is know as Gandhiji's political mentor? (7)

## Down

1. The first Asian to win the Nobel Prize for Literature was Great Admirer of Gandhi who was he? (6)
2. In 1931 Gandhiji made a short trip to which Country?. (6)
3. In 1910, he founded _________, near Durban, a cooperative colony for Indians. (11)
5. Gandhiji went to London in 1931 to attained which Confrence? (10)
6. In 1891 Gandhiji enrolled in the High Court of _______? (6)
7. Which Sanskrit word meaning "truth and firmness" is Associated with Ghandhiji? (10)
8. In 1942, Gandhi issued the last call for independence from British rule, and Started which movement? (9)
11. Gandhiji Gave "Gurudev" Title to whome? (12)
12. Indians revered him as a saint and began to call him (great-souled) : (7)
13. Gandhi addressed a letter to Which Viceroy, about breaking "salt law"? (9)

**Answers Next Issue. Send Answers before August 15th. Names of Those who give correct answers will be published.**

**Compiled By Geetha Keshav**

# Movement, He was Always There



**Baapu Heddurshetty**

Masani and Gandhi had idealogical difernces. But they had great respect for each other.

**M**inocher Rustom Masani, better known as Minoo Masani was one of the founders of the democratic socialist movement in India and also the first socialist to have begun interaction with Mahatma Gandhi on socialism. Though Masani did not accept Mahatma Gandhi's ideas, he had great respect for him. While he accompanied Gandhi on many of his morning constitutionals, he also defended Gandhi on many an occasion from the virulent attacks of the Communists.

N.R.Malkarni, who was the secretary to Mahatma Gandhi, has written about one such constitutional thus: "It was Friday, the 25th of May, 1934, and we had to walk five miles in the morning from Sisua to Patpur. Gandhiji walked bare footed with a cloth on his head, the right hand on Masani's shoulder, the left on mine; his words instructing us, his hands now soothing and now restraining us".

During that walk, Mahatma Gandhi said: "India is mostly agricultural and adult franchise world, therefore, give preponderance to agriculture" and "In the Round Table Conference I urged the adoption of adult franchise and voting by the village community. The proposal was rejected because the Round Table Conference was not representative". When Masani said that "any conference which has representatives of land lords and capitalists will reject adult franchise" Mahatma Gandhi replied "Then they have to be persuaded and converted to your views; I do not believe in the so-called class-conflict".

Masani constantly tried to convert Gandhi to Socialism. When the Bombay socialists adopted a programme, some time even before the formation of the Congress Socialist Party in 1934, Masani gave it to Mahatma Gandhi for his reaction. He later gave the program adopted by the Congress Socialist Party for his comments. It is in response to this programme that Gandhi had given a detailed and point by point reply. He had given Gandhi a book on socialism which Gandhi had read. He also used to give Gandhi copies of the 'Congress Socialist', the mouthpiece of the Congress Socialist Party, as and when it was published. Masani used to think quite ahead of his times. When the Congress Constitution was being rewritten, Masani advised Mahatma Gandhi to prescribe the conduct of elections within the Congress on the basis of single transferable vote.

When Masani mentioned that the Socialists were not for violence and that they would accept Khadi, prohibition and non-violence, Gandhi would not believe him. Gandhi wrote: "I was pained to read your reply to my article. You seem to say that socialists believe in Khadi, in prohibition and in non-violence and that the (Congress Working) committee has no evidence of speeches inciting to violence having been made. I have talked not with one socialist but with many of them. I have read their writings and their speeches. They have not (accepted) … non-violence, have ridiculed khadi and said that prohibition is only a waste of money. As for the evidence of the use of force, I get it

almost daily". "Only the day before yesterday a report of Meherally's Madras speech came into my hands and I went through it. The socialist leader explains fully what the socialists are doing. The object is to start a revolt in every sphere. But a revolt has never been possible without violence.."

Inspite of such ideological differences with Mahatma Gandhi, Masani accepted Gandhi's leadership of the freedom movement. Masani perhaps was the first of the Socialists in India to have been arrested during the freedom struggle. He was editing 'Congress Bulletin' and was arrested and detained without trial for two months. Later when Gandhi gave a call for civil disobedience, like Acharya Narendradeva, Masani, who had done his Bar-at-Law. also gave up his practice as an advocate at the Mumbai High Court and offered Satyagraha in January 1933 and courted arrest. He was sentenced to one year's rigorous imprisonment and lodged in Nasik Road Jail near Pune where he met Jayaprakash Narayan, Nanasaheb Goray, Achyut Patwardhan etc., and planned the launching of the Congress Socialist Party within the Indian National Congress.

Masani wrote his most popular book 'Our India' which was even prescribed as a text book in schools in pre-independence days. In 1941 he joined the Tatas. But then, when Mahatma Gandhi launched his 'Quit India' movement, Masani once again resigned his job with the Tatas and plunged in the movement, courting arrest. On his release from the prison, he was so popular in Mumbai, that at the age of 38, he was elected the Mayor of Mumbai, youngest of them till then.

After India became free, he founded and edited a journal 'Freedom First', and became an advocate of 'mixed economy'. Like Ambedkar he was now of the view that in an independent and democratic India, extra-constitutional methods like Satyagraha etc., had no place. But then when Mrs. Indira Gandhi became authoritarian and the call to duty came with the launching of the movement by Jayaprakash Narayan against her misrule, Minoo Masani was once again there participating in the struggle. Masani might have rejected Gandhi and his ideas, but lived up to Mahatma Gandhi's expectations.



# Why the poor should not Ape the Rich

Before the Prayers started several slips were passed to Gandhiji by members of the audience - - - - . Another friend referred to what Gandhiji had said about the Harijans and the drink habit. The friend asked why the Harijans should be asked to give up liquour, while the soldiers and the rich continued to indulge in it. Gandhiji's reply was that the question was unnecessary. If the rich would waste money on drink, that was no reason for the poor to do likewise. There was no reason why anyone should copy the evil habits of others. He was of the opinion that the upper classes had less reason to drink than the lower. The latter tried to drowm their poverty and misery in drink. For the former there was no such excuse. It might be said that the soldiers could not do without drink. Gandhiji did not agree with that, because he knew of solidiers, both Indians and Englishmen who did not touch liquor. The prohibtion laws would make no distinction between the rich and the poor, the Harijans and others. But they should not wait for the prohibition laws to be passed before giving up the evil habit. Drink brought more havoc amongst the Harijans and the labour class than any other class of society. Hence, his special appeal to the Harijans, to give it up.

**Leela Vasudev**

**(From "Gandhiji's post – prayer speeches")**

**Keshav**



# Arrow of Freedom

The father and son duo were strolling in the market place. The son tugged at the father's finger and drew his attention to the long pole and the hat placed on it. The long pole was raised in the market place in Altdorf, Uri, Switzerland. Albrecht Gessler, also known as Hermann, had placed his hat atop the pole and had ordered all the people of the area to bow before it as they passed the pole. It was his way of enforcing his will and authority on the subjects of his rule. The Harisburg bailiff had orders from his masters in Austria to compel the locals towards a rebellion so that it would pave way for the Austrian forces to occupy the areas. The locals were seething with anger but yet complied with this humiliating order. The atmosphere was pregnant with possibilities and now the time for action had actually arrived.

William Tell was a very strong man and originally came from Burglan, southeast of Lucerne. He was an excellent marksman with the crossbow and was known as the best archer of his time. His pride was as legendary as his marksmanship. It was said he never missed the target he aimed at. As his son drew his attention to the hat placed on the pole, his anger rose and he decided to do something about the situation. He walked towards the pole as his son followed him. He walked past the pole without complying with the order to bow before the hat on the pole. Gessler's servants were aghast at the sight of a man and his little son walking past the pole without bowing before it. Even after being reminded of the rule William Tell did not relent and publicly refused to bow before the hat on the pole. The servants were now convinced that this was not a mistake or the act of someone not knowing the rule. It was indeed a deliberate and provoking act. If left without any action, others may follow suit and the very purpose of placing the hat on the pole may be defeated. They dutifully reported the matter to Gessler.

Gessler duly arrived on the scene and ordered William Tell's arrest. He was about to order Tell's execution when he saw Tell's crossbow. Gessler was tempted to test Tell's skill with the bow. He offered Tell a choice of either being executed or shoot an apple placed on his son's head from a distance in one try and be let off alive. Tell was in a quandary now. Refusal to shoot the apple meant certain death. An attempt to shoot the apple may endanger his little son's life. Moreover, there was no guarantee that Gessler would really set him free even if he succeeded. While he was debating about the options, his son made the decision. The young boy had great faith in the marksmanship of his father and assured his father that he would stand perfectly still with the apple on his head and Tell could fearlessly shoot the apple. William Tell finally agreed to shoot the apple placed on his son's head.

Tell and his son were led to a nearby tree as a large crowd gathered around them. Guards kept the crowd at bay and the son was made to stand below the tree. An apple was placed on the boy's head and the distance was measured from him for Tell to take his position with his crossbow. Everyone waited with bated breath as Tell got ready and took aim. The boy was standing still unmindful of the crowd and threat to his own life. The arrow left the bow and pierced the apple placed on the boy's head! There was a sigh of relief by the crowd and Gessler himself was flabbergast. In one arrow Tell had saved his own life and earned his freedom. Gessler observed that Tell had readied two arrows and asked him why he had two arrows when he was required to shoot the apple with one arrow. Tell lied and said that it was due to force of habit. Gessler assured Tell that he had indeed earned his freedom and he can fearlessly tell the true reason for readying two arrows. Tell finally relented and told Gessler that the second arrow was intended for killing Gessler if any harm befell the little boy. Enraged at this Gessler had Tell arrested again and he was taken by boat across Lake Lucerne, to Kussnacht on the northern tip of the lake to make him spend the rest of his life in a dungeon. As luck would have it, a sudden fierce storm terrified the crew and they handed the wheel of the boat to William Tell as he was a better sailor! William Tell maneuvered the boat skillfully and instead of heading to the dungeon he escaped to the shore and ran towards Kussnacht. He ambushed Gessler and his men along a narrow stretch of road that cut through the rocks between Immensee and Kussnacht. He killed Gessler with the second arrow, an arrow which met its purpose.

With this act of killing Gessler, a rebellion against Austrian rule ensued and William Tell emerged as the central figure of Swiss patriotism. Foundations of Old Swiss Confederacy were laid. A statue of William Tell and his son has been erected in Altdorf, Switzerland. The legend of William Tell is recorded in a 15th century Swiss Chronicle. There have been poems, songs and plays about William Tell and his deeds. There was a short story about William tell in our text book when we were studying in middle school. During our visit to Switzerland in 2008 we visited Lake Lucerne though we could not go to Altdorf due to bad weather. Our host was willing to take us there despite the long distance, but I thought it fit not to venture there in pouring rain. I paid my tribute to William Tell and his little son on the banks of Lake Lucerne.

Modern historians have raised many doubts and question marks about the legend of William Tell. As it happens so many times with historians, they do not realise that non-availability of proof of someone's existence in the past does not prove their non-existence. Whether someone agrees or not, William Tell has been and is a hero for all freedom loving people. Even if he was not really there.



Amara Baapu Chintana Kannada/English monthly Registered KA/ BGW - 1723/ 2013-15 RNI No.KARBIL/2013/48372 Posted at MBC, Bangalore GPO, Bangalore-560001 on 10th of every month.



Published, Printed, Owned by - JEERIGE LOKESH, Printed at Screen Impressions, No. 88, 1st floor, Jeerige building, 11th cross, Malleswaram, Bangalore – 560 003

Published at Gandhi Bhavana, Kumara Park East, Bangalore-560001, Editor JEERIGE LOKESH.